ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ದೇವವಿಶ್ವಾಸವು ಮಾನವನ ನೈಸರ್ಗಿಕ ಬೇಡಿಕೆಯಾಗಿದೆ. ಆ ಕುರಿತು ಜನರು ವೈವಿಧ್ಯಮಯ ದೃಷ್ಟಿಕೋನವನ್ನು ಹೊಂದಿದ್ದಾರೆ. ದೇವನಿಲ್ಲವೆಂದು ವಾದಿಸುವವರೂ ಇದ್ದಾರೆ. ಹಾಗಿದ್ದರೂ ಮಾನವ ಮತ್ತು ಇತರ ಸೃಷ್ಟಿ ಜಾಲಗಳನ್ನೂ ಅವುಗಳ ಪ್ರಕ್ರಿಯೆಯನ್ನೂ ವೀಕ್ಷಿಸುವಾಗ ಒಂದು ಮಹಾ ಶಕ್ತಿಯು ಅದರ ಹಿಂದೆ ಸಕ್ರಿಯವಾಗಿರುವುದು ವ್ಯಕ್ತವಾಗುತ್ತದೆ. ಲೋಕಕ್ಕೆ ಬಂದ ಪ್ರವಾದಿಗಳೆಲ್ಲರೂ ದೇವಾಸ್ತಿತ್ವದ ಬಗ್ಗೆ ಪ್ರತಿಪಾದಿಸಿದ್ದರು. ಪ್ರಾಚೀನ ವೇದ ಗ್ರಂಥಗಳೂ ಅದನ್ನು ಸಮರ್ಥಿಸುತ್ತಿವೆ.

ಲೇಖಕ, ಪ್ರೊ ಕಮಾಲ್ ಪಾಶಾರು ಬರೆದಿರುವ 'ದೇವಾಸ್ತಿತ್ವವನ್ನು ನಿರಾಕರಿಸಲಾದೀತೇ' ಎಂಬ ಈ ಕೃತಿಯಲ್ಲಿ ವೈಚಾರಿಕ ಮತ್ತು ವೈಜ್ಞಾನಿಕ ಆಧಾರದಲ್ಲಿ ದೇವವಿಶ್ವಾಸದ ವಾಸ್ತವಿಕತೆಯನ್ನು ಸಮರ್ಥಿಸಿದ್ದಾರೆ. ಹಾಗೆಯೇ ಪ್ರಾಚೀನ ವೇದ ಗ್ರಂಥಗಳಲ್ಲಿರುವ ದೇವ ಕಲ್ಪನೆಯನ್ನು ಸಂಕ್ಷಿಪ್ತವಾಗಿ ಉಲ್ಲೇಖಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಇದೊಂದು ಸಂಶೋಧನಾತ್ಮಕ ಕೃತಿಯಾಗಿದೆ. ಇದು ಮಲಯಾಳ ಭಾಷೆಯಲ್ಲಿ ಬರೆದ ಕೃತಿಯ ಕನ್ನಡಾನುವಾದದ ಹದಿಮೂರನೆಯ ಮುದ್ರಣ. ಈ ಕಿರು ಹೊತ್ತಗೆಯು ದೇವವಿಶ್ವಾಸದ ವಾಸ್ತವಿಕತೆಯನ್ನು ಸಾಕ್ಷ್ಯಾಧಾರಗಳ ಸಹಿತ ಗ್ರಹಿಸಲು ಆಸ್ತಿಕರಿಗೂ ನಾಸ್ತಿಕರಿಗೂ ಸಹಾಯಕವಾದೀತೆಂದು ನಿರೀಕ್ಷಿಸುತ್ತೇವೆ. ಸೃಷ್ಟಿಕರ್ತನಾದ ಅಲ್ಲಾಹನು ನಮ್ಮ ಈ ಕಿರು ಸೇವೆಯನ್ನು ಸತ್ಕರ್ಮಗಳ ಸಾಲಿಗೆ ಸೇರಿಸಿ ಅನುಗ್ರಹಿಸಲಿ.

ಶಾಂತಿ ಪ್ರಕಾಶನ

ನೀವು ಪರಾಧೀನರಲ್ಲದಿದ್ದರೆ ಮತ್ತು ನಿಮ್ಮ ಭಾವನೆಯಲ್ಲಿ ನೀವು ಸತ್ಯವಾದಿಗಳಾಗಿದ್ದರೆ, ಮರಣ ಹೊಂದುತ್ತಿರುವವನ ಪ್ರಾಣವು ಗಂಟಲಿನ ವರೆಗೆ ತಲಪಿದ್ದಾಗ ಮತ್ತು ಅವನು ಸಾಯುತ್ತಿರುವುದನ್ನು ನೀವು ಕಣ್ಣಾರೆ ಕಾಣುತ್ತಿರುವಾಗ ಹೊರಟು ಹೋಗುತ್ತಿರುವ ಅವನ ಪ್ರಾಣವನ್ನು ಮರಳಿ ತರುವುದಿಲ್ಲವೇಕೆ? ಆಗ ಅವನಿಗೆ ನಿಮಗಿಂತಲೂ ನಾವು ಹೆಚ್ಚು ನಿಕಟವಾಗಿರುತ್ತೇವೆ. ಆದರೆ ನಿಮಗೆ ತೋರುವುದಿಲ್ಲ.

(ಪವಿತ್ರ ಕುರ್‌ಆನ್: 56: 83–87)

# ದೇವಾಸ್ತಿತ್ವವನ್ನು ನಿರಾಕರಿಸಲಾದೀತೇ?

**ದೇ**ವನಿದ್ದಾನೆಯೇ ಇಲ್ಲವೇ ಎಂಬ ಪ್ರಶ್ನೆಗಳನ್ನು ನಿರ್ಲಕ್ಷಿಸುವಂತಿಲ್ಲ. ಏಕೆಂದರೆ ದೇವ ಮತ್ತು ದೈವಿಕ ಮಾರ್ಗದರ್ಶನಗಳಿವೆಯೆಂದಾದರೆ ಅದರಂತೆ ಜೀವಿಸಲು ನಾವು ನಿರ್ಬಂಧಿತರಾಗುತ್ತೇವೆ. ದೇವ ನಿರ್ದೇಶನಗಳನ್ನು ನಿರ್ಲಕ್ಷಿಸಿ ಬಾಳಿದರೆ ಶಿಕ್ಷೆಗೆ ಒಳಗಾಗಬೇಕಾದೀತೆಂದು ಪ್ರವಾದಿಗಳೆಲ್ಲರೂ ಎಚ್ಚರಿಕೆ ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ ದೇವನಿದ್ದಾನೆಯೇ ಎಂಬ ಪ್ರಶ್ನೆಯನ್ನು ನಾವು ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ. ಇತರ ಅನೇಕ ವಿಷಯಗಳ ಕುರಿತು ನಾವು ಅಧ್ಯಯನ, ಸಂಶೋಧನೆಗಳನ್ನು ನಡೆಸುತ್ತೇವೆ. ಹಾಗೆಯೇ ಈ ಪ್ರಮುಖ ಪ್ರಶ್ನೆಯನ್ನು ನಿರ್ಲಕ್ಷಿಸುವುದು ವಿವೇಕವಂತರಿಗೆ ಭೂಷಣವಲ್ಲ.

ದೇವವಿಶ್ವಾಸವು ಮಾನವನ ನೈಸರ್ಗಿಕ ಬೇಡಿಕೆಯಾಗಿದೆ. ಅತಿ ಪ್ರಾಚೀನ ಕಾಲದಿಂದಲೇ ಮಾನವನು ದೇವವಿಶ್ವಾಸಿಯಾಗಿದ್ದನೆಂದು ಇತಿಹಾಸದಿಂದ ತಿಳಿದು ಬರುತ್ತದೆ. ಅಂತೆಯೇ ವಿವಿಧ ಕಾಲ ಮತ್ತು ವಿವಿಧ ದೇಶಗಳಲ್ಲಿ ಹುಟ್ಟಿ ಬೆಳೆದ ಪ್ರವಾದಿಗಳೂ ಮಹಾ ಪುರುಷರೂ ದೇವವಿಶ್ವಾಸದ ಬಗ್ಗೆ ಒತ್ತಿ ಹೇಳಿರುವುದು ಕಂಡು ಬರುತ್ತದೆ. ಅವರೆಲ್ಲರೂ ದೇವನಿದ್ದಾನೆಂಬ ಒಂದು ಮಹಾ ಸುಳ್ಳನ್ನು ಪ್ರಚುರ ಪಡಿಸಿದರೆಂದು ನಂಬಲು ಕಷ್ಟವಿದೆ. ಅವರೆಲ್ಲರ ಪ್ರಾಮಾಣಿಕತೆಯನ್ನು ಒಂದೇ ಬಾರಿಗೆ ನಿರಾಕರಿಸಲೂ ಸಾಧ್ಯವಿಲ್ಲ.

ನಾವು ಕ್ಷಣಕಾಲ ಆಲೋಚಿಸಿದರೆ, ಮಾನವನೇ ಸ್ವತಃ ದೇವಾಸ್ತಿತ್ವದ ಒಂದು ಜೀವಂತ ಮಾದರಿಯಾಗಿದ್ದಾನೆಂದು ವ್ಯಕ್ತವಾಗುತ್ತದೆ. ಕೆಲವು ವರ್ಷಗಳ ಹಿಂದೆ ಶೂನ್ಯವಾಗಿದ್ದ ನಾವೆಲ್ಲರೂ ರೂಪುಗೊಂಡ ಬಗೆಯನ್ನೊಮ್ಮೆ ಆಲೋಚಿಸಿ ನೋಡಿರಿ! ಸ್ತ್ರೀ-ಪುರುಷ ಅಂಡಾಣು ಮತ್ತು ಬೀಜಾಣುಗಳ ಸಂಯೋಗದಿಂದ ಮಾನವನು ರೂಪು

ತಾಳುತ್ತಾನೆಂಬುದನ್ನು ನಾವು ಅರಿತಿದ್ದೇವೆ. ಈ ಪ್ರಕ್ರಿಯೆಯಲ್ಲಿ ಪುರುಷ ಬೀಜಾಣುವಿಗೆ ಒಂದು ಸ್ತ್ರೀ ಅಂಡಾಣುವಿದೆ ಮತ್ತು ಅದರ ಜತೆಗೂಡಿ ಒಂದು ಮಗುವನ್ನು ಹುಟ್ಟಿಸಬೇಕಾಗಿದೆಯೆಂಬುದು ತಿಳಿದಿದೆಯೇ? ಹಾಗೆಯೇ ಸ್ತ್ರೀ ಅಂಡಾಣುವಿಗೆ, ಪುರುಷ ಬೀಜಾಣುವಿನ ಜತೆಗೂಡಿ ಮಾನವ ಶಿಶುವಿಗೆ ಜನ್ಮ ನೀಡಬೇಕಾಗಿದೆಯೆಂಬುದು ತಿಳಿದಿದೆಯೇ? ಇಲ್ಲ, ಹಾಗಾದರೆ ಪುರುಷ ಬೀಜಾಣು ಮತ್ತು ಸ್ತ್ರೀ ಅಂಡಾಣು ಹಾಗೂ ಜನಿಸಲಿರುವ ಮಗುವನ್ನು ಜೋಡಿಸುವ ಒಂದು ಉದ್ದೇಶ ಮತ್ತು ಜ್ಞಾನ ಖಂಡಿತ ವಾಗಿಯೂ ಇರಲೇಬೇಕು. ಹಾಗೆಯೇ ಅವುಗಳನ್ನು ಪರಸ್ಪರ ಜೋಡಿಸುವ ತಂತ್ರಜ್ಞಾನದ ಓರ್ವ ಒಡೆಯನಿರಬೇಕೆಂದೂ ನಾವು ಊಹಿಸಬಹುದಲ್ಲವೇ? ಬೀಜಾಣು ಮತ್ತು ಅಂಡಾಣುಗಳ ಸಂಯೋಗದಿಂದ ಉಂಟಾದ ಪ್ರಥಮ ಕೋಶವು ವಿಭಜನೆ ಹೊಂದಿ ಎರಡಾಗುವುದು. ಅನಂತರ ವಿಭಜಿಸುತ್ತಾ ಅವು ಕೋಟಿಗಟ್ಟಲೆ ಸಂಖ್ಯೆಗಳಿಗೆ ತಲುಪು ತ್ತವೆ. ಈ ರೀತಿ, ಅವು ನೂರು ವರ್ಷಗಳ ಕಾಲ ಸಕ್ರಿಯವಾಗಿರುವ ಹೃದಯಕ್ಕೂ ಅತ್ಯದ್ಭುತವಾದ ಮೆದುಳಿಗೂ ಹಲ್ಲು ಮತ್ತು ಅಸ್ಥಿಪಂಜರಗಳಿಗೂ ಜನ್ಮ ನೀಡುತ್ತವೆ. ಓರ್ವ ನುರಿತ ಕಲೆಗಾರನಂತೆ ಅವು ಕ್ರಿಯಾಶೀಲವಾಗುತ್ತದೆ. ಹೀಗೆ ಆ ಪ್ರಥಮ ಕೋಶಕ್ಕೆ, ಮಗುವಿನ ರೂಪ ನೀಡಲು ಆದೇಶ ನೀಡಿದವನಾರೆಂದು ಒಮ್ಮೆ ಆಲೋಚಿಸಿ ನೋಡಿರಿ.

ಗರ್ಭಾಶಯವೆಂಬ ಕತ್ತಲೆ ಕೋಣೆಯಲ್ಲಿ ಕಣ್ಣೆಂಬ ಕ್ಯಾಮರಾ ಸಿದ್ಧವಾಗು ವುದನ್ನು ನಾವು ತಿಳಿದಿದ್ದೇವೆ. ಕಣ್ಣನ್ನು ರೂಪಿಸಬೇಕಾದರೆ ಕೆಲವು ತಾಂತ್ರಿಕ ಸಮಸ್ಯೆಗಳನ್ನು ಪರಿಹರಿಸುವ ನೈಪುಣ್ಯವೂ ಇರಬೇಕಲ್ಲವೇ? ಪ್ರಸ್ತುತ ಪ್ರಥಮ ಕೋಶಕ್ಕೆ ಆ ನೈಪುಣ್ಯ ಹೇಗೆ ಬಂತು? ದೃಷ್ಟಿಯ ತಾಂತ್ರಿಕ ಅಂಶವನ್ನು ಗಮನಿಸಿದರೆ, ದೇವನ ಔದಾರ್ಯದಿಂದ ಬೆಳಕು ನೋಡಲು ಸಾಧ್ಯವಾಯಿತೆಂದು ತಿಳಿಯುತ್ತದೆ. ಇಂದು ನಾವು ಕಾಣುತ್ತಿರುವ ಈ ಸುಂದರ ಲೋಕವನ್ನು ವೀಕ್ಷಿಸಬೇಕಾದರೆ ಯಾವೆಲ್ಲ ಕ್ರಿಯೆಗಳು ನಡೆಯಬೇಕೆಂದು ಆಲೋಚಿಸಿ ನೋಡಿರಿ!

1. ಸೂರ್ಯ ಪ್ರಕಾಶದಂತೆ, ಸಪ್ತವರ್ಣಗಳ ಸಂಯೋಗದಿಂದ ಉಂಟಾಗುವ ಬೆಳಕನ್ನು ಪ್ರಸಾರ ಮಾಡುವ ಒಂದು ಕೇಂದ್ರವಿರಬೇಕು.

2. ವಸ್ತುಗಳಿಗೆ ಬೆಳಕನ್ನು ಪ್ರತಿಫಲನಗೊಳಿಸುವ ಸ್ವಭಾವವಿರಬೇಕು.

3. ಬೆಳಕನ್ನು ಸ್ವೀಕರಿಸಬಲ್ಲ ಕಣ್ಣಿನಂತಹ ಒಂದು ಅವಯವವಿರಬೇಕು.

4. ಅದನ್ನು ಗ್ರಹಿಸಬಲ್ಲ ಒಂದು ಮೆದುಳಿರಬೇಕು. ಇವೆಲ್ಲವೂ ಪರಸ್ಪರ ಸಂಬಂಧ ಹೊಂದಿವೆ. ಅದಲ್ಲದೆ ಅವುಗಳಿಗೆ ಸಂಬಂಧಿಸಿದ ಇತರ ಅನೇಕ ಸಮಸ್ಯೆಗಳಿವೆ. ಉದಾಹರಣೆಗೆ, ಬೆಳಕು ಮತ್ತು ಬೆಳಕಿನ ಮೂಲ ಹಾಗೂ ವಸ್ತುಗಳಿಗೆ ಅದನ್ನು ಪ್ರತಿಫಲಿಸುವ ಸಾಮರ್ಥ್ಯವಿದ್ದರೂ ಅವು ನಮಗೆ ಗೋಚರವಾಗಬೇಕಾದರೆ ಇನ್ನೂ ಹಲವು ಉಪಾಧಿಗಳ ಅಗತ್ಯವಿದೆ.

1. ಕಣ್ಣಿನೊಳ ಬರುವ ಬೆಳಕನ್ನು ನಿಯಂತ್ರಿಸಬೇಕು.

2. ಕಣ್ಣಿನ ಕೃಷ್ಣಮಣಿಗೆ ತಲುಪುವ ಬೆಳಕನ್ನು ಕೇಂದ್ರೀಕರಿಸಬೇಕು.

3. ಅಕ್ಷಿ ಪಟಲದಲ್ಲಿ ಬಿಂಬಿಸುವ ಕೇವಲ ಉದ್ದಗಲಗಳಿರುವ ಪ್ರತಿಬಿಂಬವನ್ನು ಘನ ಮತ್ತು ಮೂರು ಮೈಗಳಿರುವ ವಸ್ತುವನ್ನಾಗಿ ರೂಪಿಸಿ ತಲೆಕೆಳಗಾದ ಪ್ರತಿಬಿಂಬವನ್ನು ನೇರಗೊಳಿಸಬೇಕು.

4. ಎರಡೂ ಕಣ್ಣುಗಳಲ್ಲಿ ಮೂಡುವ ಪ್ರತಿಬಿಂಬವನ್ನು ಸಮನ್ವಯ ಗೊಳಿಸಬೇಕು.

ಇಂತಹ ಸಮಸ್ಯೆಯನ್ನು ಮುಂದಾಗಿಯೇ ತಿಳಿದು ಅವುಗಳನ್ನು ಪರಿಹರಿಸುವ ಏರ್ಪಾಡನ್ನು ನೋಡಿರಿ:

1. ಕಣ್ಣಿನ ಕೃಷ್ಣಪಟಲದ ಮಧ್ಯದಲ್ಲಿ ಪ್ಯೂಪಿಲ್ (Pupil) ಎಂಬ ದ್ವಾರವಿದೆ. ಅದು ಅಧಿಕ ಬೆಳಕಿರುವೆಡೆಗೆ ನೋಡುವಾಗ ಸಣ್ಣದಾಗುತ್ತದೆ. ಬೆಳಕು ಕಡಿಮೆಯಿರುವತ್ತ ನೋಡುವಾಗ ದೊಡ್ಡದಾಗುತ್ತದೆ. ಈ ರೀತಿ ಅದು ಸದಾ ಸ್ಥಿತ್ಯಂತರ ಹೊಂದದಿದ್ದರೆ ನಮಗೆ ಯಾವ ವಸ್ತುವೂ ಸ್ಪಷ್ಟವಾಗಿ ಗೋಚರಿಸದು.

2. ಈ ದ್ವಾರದ ಸುತ್ತಲೂ ಸ್ವಲ್ಪ ಉಬ್ಬಿದಂತಿರುವ ಕೋರ್ನಿಯಾ ಎಂಬ ಕಣ್ಣಿನ ಪಾರದರ್ಶಕ ಭಾಗವು ಬೆಳಕಿನ ಕಿರಣಗಳನ್ನು ಕೇಂದ್ರೀಕರಿಸಿ ಆ ದ್ವಾರದ ಮೂಲಕ ಹಾಯಿಸುತ್ತದೆ.

3. ಕ್ಯಾಮರಾದ ಮುಂಭಾಗದಲ್ಲಿ ಒಂದು 'ಲೈನ್ಸ್' ಮತ್ತು ಹಿಂಭಾಗದಲ್ಲಿ ಒಂದು 'ಫಿಲ್ಮ್' ಇದೆಯಷ್ಟೆ. 'ಲೆನ್ಸ್' ಮತ್ತು 'ಫಿಲ್ಮ್'ಗಳ ಅಂತರವನ್ನು ಸರಿಪಡಿಸಿ ಕ್ಯಾಮರಾದಲ್ಲಿ ಸ್ಪಷ್ಟವಾದ ಪ್ರತಿಬಿಂಬ ಮೂಡುವಂತೆ ವ್ಯವಸ್ಥೆಗೊಳಿಸಲಾಗಿದೆ. ಕಣ್ಣೆಂಬ ಕ್ಯಾಮರಾದಲ್ಲಿಯೂ ಆ ಸಮಸ್ಯೆಯಿದೆ. ಕಣ್ಣಿನಲ್ಲಿ 'ಲೆನ್ಸ್' ಸ್ವಯಂ ಹೊಂದಿಸಿ ಕೊಂಡು ಈ ಸಮಸ್ಯೆಯನ್ನು ಪರಿಹರಿಸುತ್ತದೆ. ಹಾಗಲ್ಲದಿರುತ್ತಿದ್ದರೆ ಕಣ್ಣಿನ

ಗಾತ್ರವನ್ನೇ ಸದಾ ಬದಲಾಯಿಸಬೇಕಾಗುತ್ತಿತ್ತು. ನಾವು ಹತ್ತಿರದಲ್ಲಿರುವ ವಸ್ತುವನ್ನೂ ದೂರದಲ್ಲಿರುವ ನಕ್ಷತ್ರವನ್ನೂ ನೋಡುವಾಗ ಕಣ್ಣಿನ 'ಲೆನ್ಸ್' ತಕ್ಷಣವೇ ಪರಿಸ್ಥಿತಿಗೆ ಹೊಂದಿಕೊಳ್ಳುವುದರಿಂದ ನಮಗೆ ಅವುಗಳನ್ನು ಸ್ಪಷ್ಟವಾಗಿ ನೋಡಲು ಸಾಧ್ಯ ವಾಗುತ್ತದೆ. ಇದನ್ನು ಸ್ಪಷ್ಟವಾಗಿ ತಿಳಿಯಲು ಒಂದು ವಿಷಯವನ್ನು ಗಮನಿಸಿದರೆ ಸಾಕು. ಕಣ್ಣಿನಿಂದ ಆರಿಂಚು ದೂರದಲ್ಲಿರುವ ನುಸಿ ಪರದೆಯ ಮೂಲಕ ಎರಡಡಿ ದೂರದಲ್ಲಿ ಹಿಡಿದಿರುವ ಪತ್ರವನ್ನು ನಾವು ಓದಬಹುದು. ಆದರೆ ನುಸಿ ಪರದೆಯ ನೂಲುಗಳನ್ನು ನಾವು ಗಮನಿಸತೊಡಗಿದರೆ ನಮಗೆ ಓದಲಾಗುವುದಿಲ್ಲ.[1] ಕಣ್ಣು ಕೇವಲ ಒಂದು ಕ್ಯಾಮರಾವಲ್ಲ. ಮೆದುಳಿನಲ್ಲಿ ಕಣ್ಣಿಗೆ ಸಂಬಂಧಿಸಿದ ಒಂದು ಭಾಗವಿರುವುದರಿಂದ ಕಣ್ಣಿನಲ್ಲಿ ಗೋಚರಿಸುವ ಚಿತ್ರಗಳನ್ನು ಗ್ರಹಿಸಲು ಸಾಧ್ಯವಾಗುತ್ತದೆ. ಮಿದುಳಿನ ಪ್ರಸ್ತುತ ಭಾಗಕ್ಕೆ ಹಾನಿ ತಟ್ಟಿದರೆ, ಕಣ್ಣು ಸರಿಯಾಗಿದ್ದರೂ ನಮಗೆ ಏನೂ ಗೋಚರಿಸದು. ಒಟ್ಟಿನಲ್ಲಿ ಇವೆಲ್ಲವೂ ತಾಂತ್ರಿಕ ಜ್ಞಾನದ ಬುನಾದಿಯಲ್ಲಿಯೇ ರೂಪಿಸಲ್ಪಟ್ಟಿರುವುದು ಖಚಿತ.

ಶ್ರವಣದ ಸ್ಥಿತಿಯನ್ನೊಮ್ಮೆ ನೋಡಿರಿ: 1. ಶಬ್ದ ಬೇಕು. 2. ಶಬ್ದ ಸಂಚಾರಕ್ಕೊಂದು ಮಾಧ್ಯಮ ಬೇಕು. 3. ಶಬ್ದ ಆಲಿಸುವ ಅವಯವ ಅಥವಾ ಕಿವಿ ಬೇಕು. 4. ಆಲಿಸುವ ಶಬ್ದವನ್ನು ಅರ್ಥೈಸುವ ಮಿದುಳು ಬೇಕು. ಈ ನಾಲ್ಕು ವಿಷಯಗಳನ್ನು ಬೆಸೆಯುವ ಒಂದು ಜ್ಞಾನವಿಲ್ಲವೇ? ತಾಂತ್ರಿಕತೆಯಿಲ್ಲವೇ?

ಅವುಗಳಿಗೆ ಸಂಬಂಧಿಸಿದ ಅನೇಕ ತಾಂತ್ರಿಕ ಸಂಕೀರ್ಣತೆಗಳಿವೆ. ಅವುಗಳನ್ನು ಮುಂದಾಗಿ ತಿಳಿದು ಪರಿಹರಿಸುವ ಸಾಮರ್ಥ್ಯವಿರುವ ತಂತ್ರಜ್ಞಾನದ ಒಡೆಯನೇ, ಮಾತೆಯ ಗರ್ಭಾಶಯದಲ್ಲಿರುವ ಮಗುವಿಗೆ ಕಿವಿ ಜೋಡಿಸಬೇಕಾಗಿದೆ.

"ಯಾರೂ ಇಲ್ಲದ ಕಾಡಿನಲ್ಲಿ ಮರವೊಂದು ಬಿದ್ದರೆ ಶಬ್ದವಾದೀತೇ?" ಓರ್ವ ಪ್ರಶ್ನಿಸಿದ.

"ಖಂಡಿತವಾಗಿಯೂ ಉಂಟಾಗುವುದು" ಇನ್ನೋರ್ವ ಉತ್ತರಿಸಿದ.

"ಆಲಿಸಲು ಜನರಿಲ್ಲದ ಮೇಲೆ ಇನ್ನೆಂತಹ ಶಬ್ದ?"

"ಬಂದೂಕು ಸಿಡಿಸಿದರೆ ಕಿವುಡನು ಅದೇನು ಹೊಗೆ ಎಂದು ಪ್ರಶ್ನಿಸಬಹುದು" ಮೊದಲನೆಯಾತ ವಿವರಿಸಿದ.

---

1. Conrad G. Muether, Light and Vision, Time Inc, 1067 P. 56

"ಹೌದು. ಶಬ್ದ ಉಂಟಾದ ಮಾತ್ರಕ್ಕೆ ಅದು ಕೇಳಿಸಬೇಕೆಂದಿಲ್ಲ" ಮತ್ತೊಬ್ಬ ಸಮ್ಮತಿಸಿದ.

ಈ ಸಂಭಾಷಣೆಯು ಬಹಳ ಅರ್ಥಗರ್ಭಿತವಾಗಿದೆ. ಕಿವಿಯ ರಚನೆಯಲ್ಲಿ ಬಳಸಲಾಗಿರುವ ತಾಂತ್ರಿಕ ಸತ್ಯಗಳು ಅದ್ಭುತವಾಗಿವೆ. ಕಿವಿಯೊಳಗೆ ಪ್ರವೇಶಿಸುವ ಶಬ್ದ ತರಂಗವನ್ನು ಕಿವಿಯ ಮಧ್ಯ ಭಾಗದಲ್ಲಿರುವ ಸಣ್ಣೆಯಂತಹ ಮೃದು ಎಲುಬಿನ ಉಪಕರಣವು (Osicles) 90 ಪಟ್ಟು ಹೆಚ್ಚಿಸುವುದರಿಂದ ನಮಗೆ ಆಲಿಸಲು ಸಾಧ್ಯವಾಗುತ್ತದೆ.[1] ಅದೇ ಸಂದರ್ಭದಲ್ಲಿ ಕ್ಷೀಣ ಧ್ವನಿಯನ್ನು ಆ ಉಪಕರಣವು ಉಚ್ಚಗೊಳಿಸುವುದಿಲ್ಲ. ಹಾಗಿರುತ್ತಿದ್ದರೆ ಕೈ ಮತ್ತು ಎಲುಬುಗಳಿಂದ ಹೊರಡುವ ಶಬ್ದವು ನಮ್ಮ ಕಿವಿಗಪ್ಪಳಿಸಿ ನಾವು ಬೆಚ್ಚಿ ಬೀಳಬೇಕಾಗುತ್ತಿತ್ತು.[2] ಈ ತೊಂದರೆಯನ್ನು ಸೂಕ್ತವಾಗಿ ಪರಿಹರಿಸುವುದರಲ್ಲಿ ತಂತ್ರಗಾರಿಕೆಯಿಲ್ಲವೇ? ಆ ತಂತ್ರಜ್ಞನಾರು? ಅವನೇ ಕರುಣಾಳುವಾದ ದೇವ. ಘೋರ ಶಬ್ದವುಂಟಾದಾಗ ಸಣ್ಣೆಯಂತಿರುವ ಉಪಕರಣದ ತುದಿಯಲ್ಲಿರುವ ಸ್ಟಿರಪ್ ಎಂಬ ಭಾಗವು ಯಾಂತ್ರಿಕವಾಗಿ ಬೇರ್ಪಡುತ್ತವೆ. ಇದು ಕಿವಿಯ ಒಳರಂಧ್ರವು ಹರಿದು ಹೋಗದಂತಿರುವ ರಕ್ಷಣೋಪಾಯವಾಗಿದೆ.[3] ಮಧ್ಯ ಕರ್ಣದಲ್ಲಿರುವ ಯೂಸೇಶ್ಯನ್ ಟ್ಯೂಬ್, ಅಲ್ಲಿರುವ ವಾಯುವನ್ನು ವಾತಾವರಣದ ವಾಯುವಿನೊಂದಿಗೆ ಬಾಯಿಯ ಮೂಲಕ ಜೋಡಿಸುತ್ತದೆ.

ಈ ರೀತಿಯ ವ್ಯವಸ್ಥೆಯಿಲ್ಲದಿರುತ್ತಿದ್ದರೆ ಮಧ್ಯ ಮತ್ತು ಹೊರ ಕಿವಿಯನ್ನು ಬೇರ್ಪಡಿಸುವ ಪರದೆಯು ಹೆಚ್ಚಿನ ಸಂದರ್ಭಗಳಲ್ಲಿ ಹರಿದು ಹೋಗುತ್ತಿತ್ತು.[4]

ಇನ್ನೂ ನೋಡಿರಿ! ಒಳ ಕಿವಿಯನ್ನು ತಲುಪುವ ಶಬ್ದವು ಹೈಡ್ರೋಲಿಕ್ ತತ್ವದಂತೆ ಒಳ ಕಿವಿಯ ಎಲ್ಲಾ ಭಾಗಗಳಿಗೂ ತಲುಪುತ್ತದೆ. ಅಂತೆಯೇ ರಕ್ತಧಮನಿಗಳು ಒಳಕಿವಿಯಲ್ಲಿರುವ ಮಿದುಳಿಗೆ ಸಂಬಂಧಿಸಿದ ನರಗಳಿಂದ ದೂರದಲ್ಲಿ ಹರಿಯುತ್ತವೆ. ಹಾಗಲ್ಲದಿರುತ್ತಿದ್ದರೆ ರಕ್ತ ಧಮನಿಗಳ ಮಿಡಿತವನ್ನು ನಾವು ಸದಾ ಕೇಳಬೇಕಾಗುತ್ತಿತ್ತು. ಅದು ನಮ್ಮ ಸ್ವಾಸ್ಥ್ಯವನ್ನು ಕೆಡಿಸುತ್ತಿತ್ತು. ಆ ನರಗಳು ಒಂದು ದ್ರವದಿಂದ

**1.** S.S. Stevens and Ford Warshefsky, Sound and Hearing, Time Inc 1966 P. 41

**2.** Ibid 51

**3.** Ibid P. 51

**4.** Rovert I Maecy, Human Physiology, Prentice Hall P. 140

ಆವರಿಸಲ್ಪಟ್ಟಿವೆ. ದ್ರವದ ಇನ್ನೊಂದು ತುದಿಯಲ್ಲಿ ರಕ್ತ ಧಮನಿಗಳು ಕೊನೆಗೊಳ್ಳುತ್ತವೆ. ಎಂತಹ ಸೂಕ್ಷ್ಮ ಮುಂಜಾಗ್ರತೆ! ಇದರ ಹಿಂದೆ ಯಾವ ಯೋಜನೆಯೂ ಇಲ್ಲವೆಂದು ಹೇಳಲಾದೀತೇ? ನಮಗೆ ಕಿವಿ ಮತ್ತು ಕಣ್ಣುಗಳನ್ನು ನೀಡಿರುವ ದೇವನನ್ನು ನಾವು ಸ್ತುತಿಸದಿರುವುದಾದರೂ ಹೇಗೆ? ದೇವನು ಹೇಳಿರುವುದು ಎಷ್ಟೊಂದು ಸತ್ಯ, "ನಿಮಗೆ ಅವನು (ದೇವನು) ಕಣ್ಣು ಮತ್ತು ಕಿವಿಗಳನ್ನು ಸೃಷ್ಟಿಸಿಕೊಟ್ಟನು. (ಆದರೂ) ನೀವು ಸ್ವಲ್ಪವೇ ಕೃತಜ್ಞರಾಗಿದ್ದೀರಿ." (ಕುರ್‌ಆನ್)

ಹೀಗೆ ಮಾನವ ಶರೀರದ ಒಂದೊಂದೇ ಅಂಗದ ಬಗ್ಗೆ ಬರೆಯ ಹೊರಟರೆ ದೊಡ್ಡ ದೊಡ್ಡ ಗ್ರಂಥಗಳನ್ನೇ ಬರೆಯಬೇಕಾದೀತು. ಇಲ್ಲಿ ಕೇವಲ ಒಂದೆರಡು ವಿಷಯಗಳನ್ನಷ್ಟೇ ಪ್ರಸ್ತಾವಿಸಲಾಗಿದೆ.

ನಾವು ಸೇವಿಸುತ್ತಿರುವ ಆಹಾರದ ಬಗ್ಗೆ ಆಲೋಚಿಸಿ ನೋಡಿರಿ:

1. ಹೂಗಳು 2. ಮಕರಂದ 3. ಜೇನ್ನೊಣ 4. ಆಹಾರ ಪದಾರ್ಥ 5. ಜಠರ 6. ದೇಹದ ಶಕ್ತಿ ಮತ್ತು ನಿರ್ಮಾಣದ ವ್ಯವಸ್ಥೆ ಇತ್ಯಾದಿಗಳು ಪರಸ್ಪರ ಸಂಬಂಧ ಹೊಂದಿರುವುದು ಕಂಡು ಬರುತ್ತದೆ. ಗಿಡ ಮರಗಳ ಪರಾಗ ಸ್ಪರ್ಶದಲ್ಲಿ ಜೇನ್ನೊಣ ಗಳು ಪ್ರಮುಖ ಪಾತ್ರ ವಹಿಸುತ್ತವೆ. ಹೂಗಳಲ್ಲಿರುವ ಮಕರಂದವು ಜೇನ್ನೊಣ ಗಳನ್ನು ತಮ್ಮೆಡೆಗೆ ಆಕರ್ಷಿಸುತ್ತವೆ.

ಸಸ್ಯಗಳಿಗೆ ಮಕರಂದದ ಯಾವ ಅಗತ್ಯವೂ ಇಲ್ಲ. ಅದೇ ರೀತಿ ಜೇನ್ನೊಣಗಳು ಪ್ರಜ್ಞಾಪೂರ್ವಕವಾಗಿ ಪರಾಗ ಪ್ರಸಾರ ನಡೆಸುವುದಿಲ್ಲ. ಪರಾಗ ಸ್ಪರ್ಶದಿಂದ ಗಿಡಮರ ಗಳಲ್ಲಿ ಫಲಗಳುಂಟಾಗುತ್ತವೆ.

ಆಹಾರ ಪದಾರ್ಥಗಳನ್ನು ಕರಗಿಸುವ ಕಾರ್ಯವೂ ನಡೆಯಬೇಕಲ್ಲವೇ? ಬಾಯಿ, ಹಲ್ಲು, ಜಠರ, ಸಣ್ಣ ಕರುಳು, ದೊಡ್ಡ ಕರುಳು, ಗ್ರಂಥಿಗಳು, ಪಿತ್ತಕೋಶ, ಪ್ಲೀಹ, ಮೆದುಳು ಇತ್ಯಾದಿಗಳೆಲ್ಲವೂ ಸುವ್ಯವಸ್ಥಿತವಾಗಿ ಕೆಲಸ ಮಾಡಬೇಕು. ಕರಗಿದ ಆಹಾರ ವನ್ನು ಸುರಕ್ಷಿತವಾಗಿಟ್ಟು ಅದನ್ನು ಶಕ್ತಿಯಾಗಿ ಪರಿವರ್ತಿಸುವ ವ್ಯವಸ್ಥೆಯೂ ಇರಬೇಕು. ಈ ಎಲ್ಲಾ ವಿಷಯಗಳಿಗೂ ಪರಸ್ಪರ ಸಂಬಂಧವಿದೆ. ಇವೆಲ್ಲವನ್ನೂ ಸಂಯೋಜಿಸಿರು ವುದು ದೇವನಲ್ಲವೇ? ಮಾನವ ಬುದ್ಧಿಯನ್ನು ಬಡಿದೆಬ್ಬಿಸುವ ಅನೇಕ ವಿಷಯಗಳು ಆಹಾರ ವ್ಯವಸ್ಥೆಯಲ್ಲಿ ಅಡಕವಾಗಿದೆ. ಆ ಬಗ್ಗೆ ಒಂದೆರಡು ವಿಷಯಗಳನ್ನು ಮಾತ್ರ ಪರಿಶೀಲಿಸೋಣ. ಆಹಾರವು ರುಚಿಯಿಲ್ಲದಿದ್ದರೂ ನಾವು ಸೇವಿಸಲು

ನಿರ್ಬಂಧಿತರಾಗಿದ್ದೇವೆ. ದೇಹದ ಕೊರತೆಯನ್ನು ನೀಗಿಸಲು ಮತ್ತು ಶಕ್ತಿ ಗಳಿಸಲು ಆಹಾರ ಸೇವಿಸಲೇಬೇಕಾಗುವುದು. ಆದರೆ ಆಹಾರವು ರುಚಿಕರವಾಗಿರುವುದರಿಂದ ಅದನ್ನು ತಿನ್ನಬೇಕೆಂಬ ಪ್ರೇರಣೆ ನಮಗೆ ದೊರೆಯುತ್ತದೆ. ನೀವೊಮ್ಮೆ ಆಲೋಚಿಸಿರಿ. ಮಾಂಸಾಹಾರವನ್ನು ಜೀರ್ಣಗೊಳಿಸುತ್ತಿರುವ ಜಠರವು ಸ್ವಯಂ ಮಾಂಸವೇ ಅಲ್ಲವೇ. ಹಾಗಾದರೆ ಅದೇಕೆ ಜೀರ್ಣವಾಗುವುದಿಲ್ಲ? ದೇವನು ಕೆಲವು ಮುಂಜಾಗ್ರತೆ ಗಳನ್ನು ಕೈಗೊಂಡಿರುವುದ ರಿಂದ ಅದು ಹಾಗಾಗುವುದಿಲ್ಲ. ಜಠರವು ಜೀರ್ಣಗೊಳ್ಳದಂತೆ ಎರಡು ವಿಧದ ಮುಂಜಾಗ್ರತೆಗಳನ್ನು ಕೈಗೊಳ್ಳಲಾಗಿದೆ. ಸಾಮಾನ್ಯ ಸ್ಥಿತಿಯಲ್ಲಿ ಆಹಾರವು ಜಠರಕ್ಕೆ ತಲುಪಿದ ಬಳಿಕವೇ ಆಹಾರವನ್ನು ಜೀರ್ಣಿಸಲು ನೆರವಾಗುವ ಹೈಡ್ರೋಕ್ಲೋರಿಕ್ ಆಮ್ಲ ಮತ್ತು ಪೆಪ್ಸಿನ್‌ಗಳ ಉತ್ಪಾದನೆಯಾಗುತ್ತದೆ.[1] ಅಂತಹ ರಾಸಾಯನಿಕ ವಸ್ತುಗಳಿಂದ ಜಠರವನ್ನು ರಕ್ಷಿಸಲು ಒಂದು ತೆಳುವಾದ ಪಟಲ (Mucus) ಇದೆ.

ಈ ರಾಸಾಯನಿಕ ವಸ್ತು(Enzymes)ಗಳನ್ನು ಉತ್ಪಾದಿಸುವ ಕೋಶಗಳೇ ಪ್ರಸ್ತುತ ರಾಸಾಯನಿಕ ವಸ್ತುಗಳಿಂದ ಕರಗುವುದಿಲ್ಲವೇಕೆ? ಅದಕ್ಕೂ ಕಾರಣಗಳಿವೆ. ಉತ್ಪಾದನೆಯ ವೇಳೆ ಆ ರಾಸಾಯನಿಕ ವಸ್ತುಗಳು ಸಕ್ರಿಯವಾಗಿರುವುದಿಲ್ಲ. ಅನ್ನನಾಳವನ್ನು ಪ್ರವೇಶಿಸಿದ ಬಳಿಕವಷ್ಟೇ ಅವು ಕ್ರಿಯಾಶೀಲವಾಗುತ್ತದೆ. ಉದಾಹರಣೆಗೆ ಪೆಪ್ಸಿನ್ 'ಪೆಪ್ಸಿ ನೋಜಿನ್' ಎಂಬ ನಿಷ್ಕ್ರಿಯ ವಸ್ತುವಿನ ರೂಪದಲ್ಲಿ ಉತ್ಪಾದಿಸಲ್ಪಡುತ್ತದೆ. ಜಠರದ ಇನ್ನೊಂದು ಭಾಗದಲ್ಲಿ ಉತ್ಪಾದಿಸಲ್ಪಡುವ ಹೈಡ್ರೋಕ್ಲೋರಿಕ್ ಆಮ್ಲವು ಅದನ್ನು ಸಕ್ರಿಯಗೊಳಿಸುತ್ತದೆ. ಎಂತಹ ಅದ್ಭುತ ಮುಂಜಾಗ್ರತೆ! ಜಠರವು ತುಂಬಿದಾಗ ನಮಗೆ ಆಹಾರವು ಸಾಕೆನಿಸುವುದಿಲ್ಲವೇ? ಅದಕ್ಕೂ ಕೆಲವು ಕಾರಣಗಳಿವೆ. ಜಠರ ಮತ್ತು ಸಣ್ಣ ಕರುಳುಗಳ ಪ್ರವೇಶ ದ್ವಾರದಲ್ಲಿ ಪೈಲೋರಸ್ ಎಂಬ ರಕ್ಷಕ ಪೇಶಿಯಿದೆ. ಅದು ಆಹಾರವನ್ನು ಸ್ವಲ್ಪ ಸ್ವಲ್ಪವಾಗಿ ಸಣ್ಣ ಕರುಳಿಗೆ ಕಳುಹಿಸುತ್ತದೆ.[2] ಆದ್ದರಿಂದಲೇ ಹಲವು ಗಂಟೆಗಳ ಅಂತರದಲ್ಲಿ ನಾವು ಆಹಾರ ಸೇವಿಸಿದರೆ ಸಾಕಾಗುತ್ತದೆ. ಈ ಕ್ರಿಯೆಗಳಲ್ಲಿ ಯಾವುದೇ ತಿಳುವಳಿಕೆ ಮತ್ತು ತಂತ್ರಗಾರಿಕೆಯಿಲ್ಲವೆಂದು ಹೇಳಲು ಸಾಧ್ಯವೇ?

ನೀವೊಮ್ಮೆ ಸುತ್ತಲೂ ಕಣ್ಣು ಹಾಯಿಸಿರಿ! ದೇವಾನುಗ್ರಹಗಳ ಅನಂತ

---

1. Alan E. Nourse, The Body P. 11
2. Alan E. Nourse, The Body P. 102

ನಿದರ್ಶನಗಳೇ ಕಾಣಿಸುತ್ತವೆ.

1. ಮಾನವನಿಗೆ ಉಸಿರಾಡಲು ಆಮ್ಲಜನಕ, ಅರ್ಥಾತ್ ಪ್ರಾಣವಾಯುಬೇಕು. ವಾಯುವಿನಲ್ಲಿ ಆಮ್ಲಜನಕದ ಪ್ರಮಾಣವನ್ನು ಕಾಪಾಡಲು, ದೇವನು ಮಾಡಿರುವ ಏರ್ಪಾಡುಗಳನ್ನು ನೋಡಿರಿ! ನಿಮ್ಮ ಸುತ್ತಲಿನ ಸಸ್ಯಗಳು ವರ್ಷಂಪ್ರತಿ 40 ಕೋಟಿ ಟನ್ ಆಮ್ಲಜನಕವನ್ನು ವಾತಾವರಣದಲ್ಲಿ ವಿಲೀನಗೊಳಿಸುತ್ತದೆ. ಈ ವ್ಯವಸ್ಥೆಯಿಲ್ಲದಿರುತ್ತಿದ್ದರೆ ಮಾನವರು ಮತ್ತು ಪ್ರಾಣಿಗಳ ಉಸಿರಾಟದಿಂದ, ವಾಯುವಿನಲ್ಲಿ ಆಮ್ಲಜನಕವು ಮುಗಿದು ನಮ್ಮ ಜೀವನವೇ ಅಸಾಧ್ಯವಾಗುತ್ತಿತ್ತು.

2. ವಾಯುವಿನಲ್ಲಿ ಅಂಗಾರಾಮ್ಲವು ಇಲ್ಲದಿರುತ್ತಿದ್ದರೆ ಗಿಡಗಳಿಗೆ ಆಹಾರವನ್ನು ತಯಾರಿಸಲು ಸಾಧ್ಯವಾಗುತ್ತಿರಲಿಲ್ಲ.

3. ಸಸ್ಯಗಳು ಹೀರುವ ಅಂಗಾರಾಮ್ಲವು ಪುನಃ ಭರ್ತಿಗೊಳ್ಳದಿದ್ದರೆ ಮೂರು ವರ್ಷಗಳಲ್ಲೇ ಅದು ಸಂಪೂರ್ಣವಾಗಿ ಮುಗಿದು ಹೋಗುತ್ತಿತ್ತು. ಮಾನವರು ಮತ್ತು ಪ್ರಾಣಿ ಜಂತುಗಳು ಉಸಿರಾಡುವಾಗ ಅಂಗಾರಾಮ್ಲವನ್ನು ಹೊರ ಬಿಡುವುದರಿಂದ ಅದರ ಸಂಗ್ರಹವು ಕಡಿಮೆಯಾಗುವುದಿಲ್ಲ.

4. ಸೂರ್ಯನಿಂದ ಹೊರ ಬರುವ ಮಾರಕವಾದ ಅಲ್ಟ್ರಾವೈಲೆಟ್ ಕಿರಣಗಳನ್ನು ವಾತಾವರಣವು ತಡೆ ಹಿಡಿದು ಜೀವ ಜಾಲಗಳಿಗೆ ಅಗತ್ಯವಿರುವ ಕಿರಣಗಳನ್ನು ಮಾತ್ರ ಬಿಡುತ್ತವೆ. ಈ ರೀತಿಯ ರಕ್ಷಣಾ ಕ್ರಮವಿಲ್ಲದಿರುತ್ತಿದ್ದರೆ ನಮ್ಮ ಜೀವನವು ಅದೆಂದೋ ಕೊನೆ ಗೊಳ್ಳುತ್ತಿತ್ತು.

5. ಬಾಹ್ಯಾಕಾಶದಿಂದ ಬರುವ ಉಲ್ಕೆಗಳು ವಾಯುವಿನೊಂದಿಗೆ ಘರ್ಷಿಸಿ ಭಸ್ಮವಾಗುತ್ತವೆ. ಅವು ಆ ರೀತಿ ಉರಿದು ಭಸ್ಮವಾಗದಿರುತ್ತಿದ್ದರೆ ಅವುಗಳ ಹೊಡೆತದಿಂದ ಜೀವ ಸಂಕುಲವೇ ಅಳಿದು ಹೋಗುತ್ತಿತ್ತು.

6. ವಾಯು ಮಂಡಲವಿಲ್ಲದಿರುತ್ತಿದ್ದರೆ ಶಬ್ದವು ಕೇಳಿಸುತ್ತಿರಲಿಲ್ಲ.

7. ವಾಯುಮಂಡಲವನ್ನು ಭೂಮಿಯೊಂದಿಗೆ ಬಂಧಿಸಿಡುವ ಆಕರ್ಷಣಾ ಬಲವೆಂಬ ವ್ಯವಸ್ಥೆಯಿಲ್ಲದಿರುತ್ತಿದ್ದರೆ ಏನಾಗುತ್ತಿತ್ತೆಂದು ವಿವರಿಸಬೇಕಾಗಿಲ್ಲವಷ್ಟೇ.

8. ಗುರುತ್ವಾಕರ್ಷಣೆಯ ಬಲದಿಂದಾಗಿಯೇ ನಾವು ಇಲ್ಲಿ ಉಳಿದು ಕೊಂಡಿದ್ದೇವೆ.

9. ಗಗನಯಾನಿ ಕರ್ನಲ್ ಆರ್ಮ್‌ಸ್ಟ್ರಾಂಗ್‌ರಿಗೆ ಅಂತರಿಕ್ಷದಲ್ಲಿ ಕೆಲವು

ಗಂಟೆಗಳಷ್ಟು ಕಾಲ ವ್ಯಯಿಸಲು ಬೇಕಾದ ವಾಯು, ನೀರು ಮುಂತಾದ ಸೌಲಭ್ಯಗಳಿಗೆ ಕೋಟಿಗಟ್ಟಲೆ ಡಾಲರ್ ಬೇಕಾಯಿತು. ಹಾಗಿದ್ದರೆ ನಾವು ಈ ತನಕ ಉಸಿರಾಡಿರುವ ವಾಯು ಮತ್ತು ಕುಡಿದ ನೀರಿನ ಬೆಲೆಯನ್ನೊಮ್ಮೆ ಕೂಡಿಸಿ ನೋಡಿರಿ! ದೇವಾನುಗ್ರಹಗಳನ್ನು ನಾವು ಧಾರಾಳವಾಗಿ ಉಪಯೋಗಿಸುತ್ತಿದ್ದೇವೆ. ಹೀಗಿರುತ್ತಾ ದೇವನಿಗೆ ಕೃತಜ್ಞತೆ ತೋರದಿ ರುವುದು ಘೋರ ಅಪರಾಧವಲ್ಲವೇ?

10. ಈ ಭೂಮಿಯಲ್ಲಿ ಪ್ರಾಣವನ್ನು ಸುರಕ್ಷಿತವಾಗಿರಿಸಲು ಏನೆಲ್ಲ ವ್ಯವಸ್ಥೆ ಯಿರಬೇಕೆಂಬುದನ್ನು ನೀವು ಅರಿತಿದ್ದೀರಾ? ಜೀವಕ್ಕೆ ಅಗತ್ಯವಿರುವ ಶಕ್ತಿ ಪೂರೈಸಲು ಒಂದು ನಕ್ಷತ್ರ (ಸೂರ್ಯ)ಬೇಕು.

11. ಅದರ ತಾಪವು ಹೆಚ್ಚು ಕಡಿಮೆಯಾಗಬಾರದು. ನಮ್ಮ ಸೂರ್ಯನ ತಾಪವು 13% ಕಡಿಮೆಯಾದರೆ ಭೂಮಿಯ ಮೇಲೆ ಒಂದು ಮೈಲು ದಪ್ಪದಲ್ಲಿ ಮಂಜುಗಡ್ಡೆ ಆವರಿಸುವುದು.

12. ಸೂರ್ಯನ ತಾಪವು 30% ಹೆಚ್ಚಾದರೆ ಜೀವಜಂತುಗಳೆಲ್ಲವೂ ನಾಶವಾಗುವುದು.

13. ಸೂರ್ಯನ ತಾಪವು ಎಲ್ಲೆಡೆಯೂ ವಿತರಣೆಯಾಗುತ್ತಿರುವಂತೆ ಸೂಕ್ತ ವೇಗದಲ್ಲಿ ಭೂಮಿಯು ತಿರುಗಬೇಕು. ಈ ರೀತಿ ಕರಾರುವಾಕ್ಕಾಗಿ ಹಲವು ಕೆಲಸಗಳು ನಡೆಯುತ್ತಿರಬೇಕು. "ಭೂಮಿ-ಆಕಾಶಗಳ ಸೃಷ್ಟಿಯಲ್ಲಿಯೂ ರಾತ್ರಿ ಹಗಲುಗಳು ಅನುಕ್ರಮವಾಗಿ ಬರುತ್ತಿರುವುದರಲ್ಲಿಯೂ ಬುದ್ಧಿಜೀವಿಗಳಿಗೆ ಸಾಕಷ್ಟು ನಿದರ್ಶನ ಗಳಿವೆ. ಅವರು ಎದ್ದಾಗಲೂ ಕುಳಿತಾಗಲೂ ಮಲಗಿದಾಗಲೂ ಎಲ್ಲ ಸ್ಥಿತಿಗಳಲ್ಲೂ ಅಲ್ಲಾಹನನ್ನು ಸ್ಮರಿಸುತ್ತಾರೆ ಮತ್ತು ಭೂಮಿ-ಆಕಾಶಗಳ ನಿರ್ಮಾಣದ ಬಗ್ಗೆ ಪರ್ಯಾಲೋಚಿಸುತ್ತಾರೆ. (ಅವರು ಪರವಶರಾಗಿ ಹೀಗೆನ್ನುತ್ತಾರೆ) "ಪ್ರಭೂ, ನೀನು ಇವುಗಳನ್ನೆಲ್ಲ ವ್ಯರ್ಥ ಹಾಗೂ ಉದ್ದೇಶರಹಿತವಾಗಿ ಸೃಷ್ಟಿಸಲಿಲ್ಲ. ನೀನು (ನಿರರ್ಥಕ ಕಾರ್ಯಗಳನ್ನೆಸಗುವುದರಿಂದ) ಪರಿಶುದ್ಧನು. ಆದುದರಿಂದ ಓ ನಮ್ಮ ಪ್ರಭೂ, ನಮ್ಮನ್ನು ನರಕಾಗ್ನಿಯಿಂದ ರಕ್ಷಿಸು." **(ಕುರ್‌ಆನ್: 3: 190-191)**

ಕೋಶಗಳು ವಿಭಜನೆ ಹೊಂದಿ, ಅವು ವೃದ್ಧಿಸಿ ದೇಹದ ನಾನಾ ಭಾಗಗಳು ರೂಪು ತಾಳುವ ಪ್ರಕ್ರಿಯೆಯಲ್ಲಿ ಅಗೋಚರ ಶಕ್ತಿಯೊಂದು ಮಾರ್ಗದರ್ಶನ ನೀಡುತ್ತಿದೆ ಯೆಂದು ನಾವು ತಿಳಿದೆವು. ಅದೇ ರೀತಿ ಜೀವಿಗಳಿಗೂ ದೇವನು ಮಾರ್ಗದರ್ಶನವನ್ನು

ನೀಡುತ್ತಾನೆ. ಕೇವಲ ಒಂದು ಉದಾಹರಣೆಯನ್ನು ನೋಡೋಣ. ಜೇನ್ನೊಣದ ಗೂಡಿನ ಕೋಣೆಗಳನ್ನು ನೀವು ಗಮನಿಸಿದ್ದೀರಾ? ಅದಕ್ಕೆ ಆರು ಕ್ಷೇತ್ರ ಮತ್ತು ಆರು ಮೂಲೆಗಳಿವೆ. ಅದರಲ್ಲಿ, ಚೌಕ ಮತ್ತು ವೃತ್ತಾಕೃತಿಯ ಕೋಣೆಗಳಿಗಿಂತ ಹೆಚ್ಚು ಜೇನು ತುಂಬಿಕೊಳ್ಳಲು ಸಾಧ್ಯವಿದೆ. ಆರು ಕಡೆಗಳಲ್ಲಿ ಜೋಡಿಸಲ್ಪಡುವುದರಿಂದ ಅದರ ಭದ್ರತೆಯೂ ಹೆಚ್ಚುತ್ತದೆ. ಕಡಿಮೆ ಮೇಣ, ಕಡಿಮೆ ಶ್ರಮ-ಹೆಚ್ಚು ಕೋಣೆ, ಹೆಚ್ಚು ಭದ್ರತೆ ಎಂಬ ತತ್ವದಂತೆ ಅವು ರಚಿಸಲ್ಪಡುತ್ತವೆ. ಈ ವಿಸ್ಮಯವನ್ನು ನೋಡಿದ ಡಾರ್ವಿನ್, 'ಗುರುತಿಸಲ್ಪಟ್ಟ ಜೀವಿಗಳಲ್ಲಿ ಜೇನ್ನೊಣವು ಅತ್ಯಂತ ವಿಸ್ಮಯಕಾರಿ' ಎಂದು ಹೇಳಿದ್ದನು. ಮೇಣ ಮತ್ತು ಶ್ರಮವನ್ನು ಕನಿಷ್ಠ ಉಪಯೋಗಿಸುವ ಅದರ ನೈಪುಣ್ಯತೆ ಯನ್ನು ಆತ ಶ್ಲಾಘಿಸಿದ್ದಾನೆ.[1] ಇಂತಹ ಕೋಣೆಗಳನ್ನು ರಚಿಸಬೇಕಾದರೆ ನಿರ್ಮಾಣ ಕಲೆ, ಗಣಿತ ಸೂತ್ರಗಳು ಚೆನ್ನಾಗಿ ತಿಳಿದಿರಬೇಕು. ತಾಂತ್ರಿಕ ಸಲಕರಣೆಗಳುಬೇಕು. ಕೇಂದ್ರಗಳು ಸಮಾನ ದೂರದಲ್ಲಿರುವ ಮೂರು ವರ್ತುಲಗಳನ್ನು ಒಟ್ಟಿಗೆ ಚಿತ್ರಿಸಲು ತಿಳಿಯಬೇಕು. ಇಷ್ಟೊಂದು ಸಂಕೀರ್ಣವಾದ ಲೆಕ್ಕಾಚಾರಗಳನ್ನು ಸಂಶೋಧಿಸಿ, ಅವುಗಳನ್ನು ಬಳಸುವ ಬುದ್ಧಿ ಜೇನ್ನೊಣಕ್ಕಿದೆಯೇ? ಕಟ್ಟಡ ನಿರ್ಮಾಣಕ್ಕೆ ಅಗತ್ಯ ವಿರುವ ಗಣಿತ ಸಮಸ್ಯೆಗಳನ್ನು ಪರಿಹರಿಸುವಂತಹ ಬುದ್ಧಿ ಕಾರ್ಯವೆಸಗಬೇಕು. ಜೇನ್ನೊಣದ ಪುಟ್ಟ ಮೆದುಳಿಗೆ ಆ ಸಾಮರ್ಥ್ಯವಿದೆಯೇ? ಇಲ್ಲದಿದ್ದರೆ ಆ ಗಣಿತಶಾಸ್ತ್ರ ಸಮಸ್ಯೆಗಳನ್ನು ಯಾರು ಪರಿಹರಿಸಿದರು? ಜೇನ್ನೊಣದ ಹೊಸ ತಲೆಮಾರುಗಳಿಗೆ ಆ ತಾಂತ್ರಿಕ ಜ್ಞಾನವನ್ನು ಯಾರು ಕಲಿಸಿಕೊಟ್ಟರು? ಹೌದು, ದೇವನ ಸೃಷ್ಟಿ ವೈಭವವನ್ನು ನಾವಿಲ್ಲಿ ಕಾಣುತ್ತೇವೆ. ನೀವು ಈ ಕುರ್‌ಆನ್ ವಾಕ್ಯವನ್ನು ಗಮನಿಸಿದ್ದೀರಾ!

**"ನಿಮ್ಮ ಪ್ರಭು ಜೇನುನೊಣಕ್ಕೆ, ಪರ್ವತಗಳಲ್ಲೂ ಮರಗಳಲ್ಲೂ ತಟ್ಟಿಗಳ ಮೇಲಿರಿಸಿದ ಬಳ್ಳಿಗಳಲ್ಲೂ ತನ್ನ ತೊಟ್ಟಿಗಳನ್ನು ಕಟ್ಟಿ ಎಲ್ಲಾ ವಿಧದ ಫಲಗಳ ರಸವನ್ನು ಹೀರಿ, ನಿನ್ನ ಪ್ರಭು ಸುಗಮಗೊಳಿಸಿದ ಮಾರ್ಗಗಳಲ್ಲಿ ಚಲಿಸುತ್ತಿರು ಎಂದು 'ವಹ್ಯ್' ಮಾಡಿದನು(ಆದೇಶವಿತ್ತನು). ಆ ನೊಣದ ಹೊಟ್ಟೆಯಿಂದ ವಿವಿಧ ಬಣ್ಣಗಳ ಪಾನಕ ಹೊರಡುತ್ತದೆ. ಅದರಲ್ಲಿ ಜನರಿಗೆ ಗುಣಾಂಶವಿದೆ. ನಿಶ್ಚಯವಾಗಿಯೂ ಚಿಂತನಶೀಲರಿಗೆ ಇದರಲ್ಲೂ ಒಂದು ನಿದರ್ಶನವಿದೆ." (ಕುರ್‌ಆನ್: 16: 68-69)**

ಸಂಕ್ಷಿಪ್ತದಲ್ಲಿ, ನಿಸರ್ಗದ ಬಗ್ಗೆ ಆಲೋಚಿಸಿದರೆ ದೇವನ ಅಸ್ತಿತ್ವದ ಮನವರಿಕೆ

---

1. Peter Farb, The Insects 10-132

ಯಾಗುತ್ತದೆ. ಕುರ್‌ಆನ್ ಪ್ರಶ್ನಿಸುತ್ತದೆ "ಮನುಷ್ಯನು ಭೂಮಿಯಲ್ಲಿ ಸಂಚರಿಸಿ ನಿಸರ್ಗ ವಸ್ತುಗಳ ಬಗ್ಗೆ ಆಲೋಚಿಸುವುದಿಲ್ಲವೇಕೆ? ಅವರಿಗೆ ಕಣ್ಣು, ಕಿವಿ, ಹೃದಯ ಗಳಿಲ್ಲವೇ?" ಇನ್ನೊಂದೆಡೆ ಈ ರೀತಿ ಹೇಳಿದೆ:

**"ಆಕಾಶ-ಭೂಮಿಗಳಲ್ಲಿ ಅದೆಷ್ಟೋ ದೃಷ್ಟಾಂತಗಳಿವೆ. ಆದರೆ ಆ ದೃಷ್ಟಾಂತ ಗಳನ್ನು ಗಮನಿಸದೇ ಅವರು ಹಾದು ಹೋಗುತ್ತಾರೆ." (12:105)**

ಈ ಪ್ರಪಂಚವು ಸುವ್ಯವಸ್ಥಿತವಾಗಿ ನಡೆಯುತ್ತಿದೆಯೆಂದು ನಾವು ತಿಳಿದೆವು. ಹೌದು, ಪ್ರಪಂಚದಲ್ಲಿರುವ ನಕ್ಷತ್ರಗಳು, ಸೂರ್ಯ, ಚಂದ್ರ, ಭೂಮಿ, ಭೂಮಿಯ ಲ್ಲಿರುವ ಎಲ್ಲ ವಸ್ತುಗಳೂ ಒಂದು ವ್ಯವಸ್ಥೆಗೆ ಬದ್ಧವಾಗಿವೆ. ಈ ನೈಸರ್ಗಿಕ ನಿಯಮ ಮತ್ತು ವ್ಯವಸ್ಥೆಗಳ ಒಡೆಯನೇ ದೇವನು. ಆತನೇ ಅವುಗಳನ್ನು ನಿಯಂತ್ರಿಸುತ್ತಿದ್ದಾನೆ. ಪ್ರಪಂಚದ ವಸ್ತುಗಳು ಅನುಸರಿಸುವ ದೇವ ನಿಯಮವನ್ನು ನಾವು ನೈಸರ್ಗಿಕ ನಿಯಮವೆಂದು ಕರೆಯುತ್ತೇವೆ. ಕುರ್‌ಆನ್ ಹೇಳುತ್ತದೆ:

**"ಆಕಾಶ-ಭೂಮಿಗಳಲ್ಲಿರುವ ಸರ್ವಸ್ವವೂ ತನ್ನಿಷ್ಟ ಅಥವಾ ಕಡ್ಡಾಯವಾಗಿ ಅಲ್ಲಾಹನಿಗೆ (ದೇವನಿಗೆ) ವಿಧೇಯವಾಗಿರುವಾಗ ಅಲ್ಲಾಹನ ಧರ್ಮವಲ್ಲದ ಬೇರೊಂದನ್ನು ಅವರು ಹುಡುಕುತ್ತಿದ್ದಾರೆಯೇ. ಅವನೆಡೆಗೇ ಅವರು ಮರಳಿಸಲ್ಪಡುವರು."**

ನಾವು ಬದುಕುತ್ತಿರುವ ಈ ಪ್ರಪಂಚದ ಕುರಿತು ವಿಜ್ಞಾನವು ಏನು ಹೇಳುತ್ತದೆಂದು ನೋಡೋಣ. ಆಧುನಿಕ ವೈಜ್ಞಾನಿಕ ಸಂಶೋಧನೆಗಳಂತೆ ಈ ಪ್ರಪಂಚವು ಅನಾದಿ ಕಾಲದಿಂದಲೇ ಅಸ್ತಿತ್ವದಲ್ಲಿರಲಿಲ್ಲ. ಅನಂತರ ಅದರ ನಿರ್ಮಾಣವಾಯಿತು. ಶೂನ್ಯದಿಂದ ಭೂಮಿ ಉಂಟಾಯಿತೆಂದು ಹೇಳುವುದು ತರ್ಕ ಬದ್ಧವಲ್ಲ. ಹಿಂದೆ ಇರಲಿಲ್ಲ. ಆ ಬಳಿಕ ಆಯಿತು. ಹಾಗಿದ್ದರೆ ಅದರ ಸೃಷ್ಟಿಯಾಗಿರಬೇಕಲ್ಲವೇ? ಆಧುನಿಕ ವೈಜ್ಞಾನಿಕ ಸಂಶೋಧನೆಗಳಿಂದ ಪ್ರಪಂಚವು ವಿಕಾಸ ಹೊಂದುತ್ತಿದೆಯೆಂದು ತಿಳಿದು ಬಂದಿದೆ.[1] ಹಾಗಿದ್ದರೆ ವಿಕಾಸ ಹೊಂದುತ್ತಿರುವ ಪ್ರಪಂಚವನ್ನು ವಿಕಸನ ಹೊಂದುತ್ತಿ ರುವ ಒಂದು ಬೆಲೂನಿಗೆ ಹೋಲಿಸಬಹುದು. ಬೆಲೂಲಿನ ಚುಕ್ಕೆಗಳನ್ನು ನಕ್ಷತ್ರ ಪುಂಜಗಳಿಗೂ ಹೋಲಿಸಬಹುದು. ಬೆಲೂನನ್ನು ಊದಿ ಗಾಳಿ ತುಂಬಿದಾಗ ಚುಕ್ಕೆಗಳ ಪರಸ್ಪರ ಅಂತರವು ಹೆಚ್ಚುತ್ತದೆ. ಅದೇ ರೀತಿ

1. George Gamow, the creation of Universe Santam Books, 1961 P. 23

ಪ್ರಪಂಚದ ನಕ್ಷತ್ರ ಸಂಚಾರವೂ ದೂರವಾಗುತ್ತಿವೆ. ಹೀಗೆ ಪ್ರಪಂಚವು ನಿರ್ದಿಷ್ಟ ಪ್ರಮಾಣದಲ್ಲಿ ವಿಕಸನ ಹೊಂದುತ್ತಿದೆ. "ಭೂತಕಾಲದ ಒಂದು ವಿಶಿಷ್ಟ ಸಂದರ್ಭದಲ್ಲಿ ಪ್ರಪಂಚದ ಎಲ್ಲಾ ವಸ್ತುಗಳೂ ಅನಂತ ಸಾಂದ್ರತೆಯುಳ್ಳ ಒಂದು ಮೂಲದಲ್ಲಿ ಹುದುಗಿಕೊಂಡಿದ್ದುವು. ಅದು ಸ್ಫೋಟಗೊಂಡಿತು. ಆ ಘಟನೆ ಅಥವಾ ಪ್ರಸ್ತುತ ಸ್ಫೋಟದಿಂದ ಪ್ರಪಂಚದ ನಿರ್ಮಾಣವಾಯಿತು. ಅಂದು ಆರಂಭಗೊಂಡ ವಿಕಾಸವು ಇಂದಿಗೂ ಮುಂದುವರಿಯುತ್ತಿದೆ. ಭೌತಶಾಸ್ತ್ರದಲ್ಲಿ ಇಂದು ನಮಗೆ ತಿಳಿದಿರುವ ಸೂತ್ರಗಳು ಸರಿ ಮತ್ತು ಸಾಮಾನ್ಯ ಪರಿಪೂರ್ಣವೆಂದಾದರೆ ಪ್ರಪಂಚವು ಒಂದು ರಹಸ್ಯ ಸ್ಫೋಟದಿಂದ ಉಂಟಾಯಿತೆಂದು ಖಡಾಖಂಡಿತವಾಗಿ ಹೇಳಬಹುದು.

ಪ್ರಪಂಚ ಉತ್ಪತ್ತಿಯ ಕುರಿತು ಕೆಲವರು ಯಥಾಸ್ಥಿತಿ ಸಿದ್ಧಾಂತವನ್ನು (Steady State Theory) ಪ್ರತಿಪಾದಿಸುತ್ತಾರೆ. ಈ ಸಿದ್ಧಾಂತದಂತೆ ಪ್ರಪಂಚವು ಅನಾದಿ ಕಾಲದಿಂದಲೂ ಇಲ್ಲಿ ಅಸ್ತಿತ್ವದಲ್ಲಿದೆ. ಪ್ರಪಂಚವು ವಿಕಾಸ ಹೊಂದುತ್ತಿದೆಯೆಂಬುದನ್ನು ಅವರೂ ಒಪ್ಪುತ್ತಾರೆ.[1] ಆದರೆ ಯಥಾ ಸ್ಥಿತಿವಾದಿಗಳು ಪ್ರಪಂಚದ ವಿಕಾಸದ ಬಗ್ಗೆ ವಿವರಿಸುವಾಗ ಶೂನ್ಯದಿಂದ ವಸ್ತುಗಳು ನಿರಂತರವಾಗಿ ಉತ್ಪಾದಿಸಲ್ಪಡುತ್ತವೆಯೆಂದು ಊಹಿಸಬೇಕಾಯಿತು. ಏಕೆಂದರೆ ಪ್ರಪಂಚವು ವಿಕಾಸ ಹೊಂದುವುದರಿಂದ ಅದರ ಸಾಂದ್ರತೆ ಕಡಿಮೆಯಾಗಬೇಕು. ಬೆಲೂನನ್ನು ಊದಿ ಉಬ್ಬಿಸಿದಾಗ ಅದರ ಬಲ ಕಡಿಮೆಯಾಗುತ್ತದಲ್ಲವೇ? ಆದರೆ ಯಥಾಸ್ಥಿತಿ ವಾದದಂತೆ ಪ್ರಪಂಚವು ಸದಾ ಒಂದೇ ಸ್ಥಿತಿಯಲ್ಲಿರಬೇಕು. ಆದ್ದರಿಂದ ಹೈಡ್ರೋಜನ್ ಝೋನ್ ಶೂನ್ಯದಿಂದ ಉತ್ಪಾದಿಸಲ್ಪಡುತ್ತಿರಬೇಕು.[2] ಒಟ್ಟಿನಲ್ಲಿ ಪ್ರಪಂಚದ ಉತ್ಪತ್ತಿಯ ಕುರಿತು ಈ ಎರಡು ಸಿದ್ಧಾಂತಗಳೇ ನಮ್ಮ ಮುಂದಿರುವುದು.[3] ಈ ಎರಡು ಸಿದ್ಧಾಂತಗಳನ್ನು ಅಂಗೀಕರಿಸಿದರೂ ಸೃಷ್ಟಿಕರ್ತನನ್ನು ಅಥವಾ ದೇವನನ್ನು ಅಂಗೀಕರಿಸಬೇಕಾಗುತ್ತದೆ. ಎರಡು ಸಿದ್ಧಾಂತಗಳ ಪ್ರಕಾರವೂ ಸೃಷ್ಟಿಕಾರ್ಯ ನಡೆಯುತ್ತಿದೆಯಲ್ಲವೇ? ಹಾಗಿದ್ದರೆ ವೈಜ್ಞಾನಿಕ ಸಂಶೋಧನೆಗಳನ್ನು ಒಪ್ಪುವವರು ಅನಿವಾರ್ಯವಾಗಿ ದೇವನನ್ನು ಅಂಗೀಕರಿಸಬೇಕಾಗುವುದು. ಆಧುನಿಕ ವೈಜ್ಞಾನಿಕ ಸಂಶೋಧನೆಗಳನ್ನು ನಿರಾಕರಿಸಿ, ನಾಸ್ತಿಕತೆಯನ್ನೇ ವಾದಿಸುವವರು

---

1. David Beggamini the Universe, Time life International 1964 P. 174
2. Ibid 334
3. George Gamow, the Creation of Universes, Optcit P. V11

ವಾಸ್ತವದಲ್ಲಿ ಮೂಢ ವಿಶ್ವಾಸಿಗಳೆನಿಸುತ್ತಾರೆ ಅಥವಾ ಆಧುನಿಕ ವೈಜ್ಞಾನಿಕ ಸಂಶೋಧನೆ ಗಳನ್ನು ಪ್ರಾಯಶಃ ಅವರು ಅರಿತಿರಲಾರರು.

ದೇವನ ಕಲ್ಪನೆಯು ಮಾನವನ ಜನ್ಮಸಿದ್ಧ ಬೇಡಿಕೆಯೆಂದು ನಂಬುವವರಿದ್ದಾರೆ. ತನಗಿಂತ ಉನ್ನತವಾದ ಒಂದು ಶಕ್ತಿಯನ್ನು ಅರಸುವ ಅಭಿಲಾಷೆ ಮಾನವನಲ್ಲಿ ಸದಾ ಕಂಡು ಬರುತ್ತದೆ. ದೇವನ ಕುರಿತು ನೈಜ ತಿಳುವಳಿಕೆಯಿಲ್ಲದವರು ತಮಗಿಂತ ಪ್ರಬಲ ವಾದವುಗಳನ್ನು ಕಂಡಾಗಲೆಲ್ಲ ಅವುಗಳಲ್ಲಿ ದೇವತ್ವವನ್ನು ಕಲ್ಪಿಸುತ್ತಾರೆ. ಕೆಲವರು ಮನುಷ್ಯರಲ್ಲಿಯೇ ಅದನ್ನು ಸಂಕಲ್ಪಿಸುತ್ತಾರೆ. ಇನ್ನು ಕೆಲವರು ಗೋಳಗಳಲ್ಲಿ ಕಾಣುತ್ತಾರೆ. ಕೆಲವರು ನಿಸರ್ಗದಲ್ಲಿ ಕಾಣುತ್ತಾರೆ. ಮತ್ತೆ ಕೆಲವರು ಸರ್ಪಗಳಲ್ಲಿ ಕಾಣುತ್ತಾರೆ. ಈ ಹಿನ್ನೆಲೆಯಲ್ಲಿ ನಿಜವಾದ ದೇವ ಯಾರು, ಅವನ ವೈಶಿಷ್ಟ್ಯಗಳೇನು, ಇತ್ಯಾದಿ ಪ್ರಶ್ನೆಗಳಿಗೆ ಉತ್ತರಗಳನ್ನು ತಿಳಿಸಬೇಕಾದುದು ದೇವನ ಕರ್ತವ್ಯವೆನಿಸುತ್ತದೆ. ಆದ್ದರಿಂದಲೇ ದೇವನು ತನ್ನ ಕುರಿತು ಪ್ರವಾದಿಗಳ ಮೂಲಕ ಮಾನವನಿಗೆ ಜ್ಞಾನ ನೀಡಿದರು. ಅಲ್ಲಾಹನ ಹೇಳುತ್ತಾನೆ: "(ಪ್ರವಾದಿಯೇ ನೀವು) ಹೇಳಿರಿ: ಅಲ್ಲಾಹ್ ಏಕಮಾತ್ರನು. ಅವನು ನಿರಪೇಕ್ಷನು. ಆತನಿಗಾವ ಸಂತಾನವೂ ಇಲ್ಲ. ಆತನು ಯಾರ ಸಂತಾನವೂ ಅಲ್ಲ."

ದೇವನಿಲ್ಲದಿದ್ದರೆ ಜೀವನವು ಅರ್ಥಶೂನ್ಯ. ನಮ್ಮ ಜೀವನ ಮೌಲ್ಯಗಳು ಮತ್ತು ಸೇವೆಗಳು ನಿಷ್ಫಲವೆಂದಾದರೆ ನಮ್ಮ ಚಟುವಟಿಕೆಗಳು ನಿರರ್ಥಕವಲ್ಲವೇ? ಹಾಗಿದ್ದರೆ ನಮ್ಮ ಮತ್ತು ಪ್ರಾಣಿಗಳ ಜೀವನಕ್ಕೆ ಏನು ವ್ಯತ್ಯಾಸವಿದೆ? ನಮ್ಮ ಸಾವೂ ಒಂದು ನೊಣದ ಸಾವಿಗೆ ಸಮಾನವಾದರೆ ನಾವು ಜೀವಿಸುವುದೂ ಜೀವಿಸದಿರುವುದೂ ಒಂದೇ ಅಲ್ಲವೇ. ಆದಿ ಮತ್ತು ಅಂತ್ಯವಿಲ್ಲದ ಶೂನ್ಯತೆಯ ಒಂದು ಹಂತದಲ್ಲಿ ನಾವು ಹುಟ್ಟುತ್ತೇವೆ, ಜೀವಿಸುತ್ತೇವೆ, ಸಾಯುತ್ತೇವೆ, ಹಾಗಿದ್ದರೆ ಸಂಭವಿಸುವುದು ಮತ್ತು ಸಂಭವಿಸದಿರುವುದರಲ್ಲಿ ವ್ಯತ್ಯಾಸವೇನಿದೆ? ಸಾವಧಾನವಾಗಿ ಆಲೋಚಿಸಿರಿ. ಇಲ್ಲಿ ಅಕ್ರಮ ನಡೆಯುತ್ತಿದೆ. ಕಳ್ಳ ಕದೀಮರು ಸಮಾಜದಲ್ಲಿ ಗೌರವದಿಂದ ಮೆರೆಯು ತ್ತಿದ್ದಾರೆ. ಅನೇಕ ವೇಳೆ ಸಜ್ಜನರು ಕಷ್ಟಪಡುತ್ತಾರೆ. ಒಬ್ಬನನ್ನು ಕೊಂದರೂ ಸಾವಿರ ಮಂದಿಯನ್ನು ಕೊಂದರೂ ನಮ್ಮ ನ್ಯಾಯ ಪೀಠಗಳಿಗೆ ಕೇವಲ ಒಂದು ಮರಣ ದಂಡನೆಯನ್ನಷ್ಟೇ ನೀಡಲು ಸಾಧ್ಯವಾಗುತ್ತದೆ. ಹೀಗೇ ಇದೆಲ್ಲವೂ ಕೊನೆಗೊಂಡರೆ ಜೀವನಕ್ಕೇನಾದರೂ ಅರ್ಥವಿದೆಯೇ?

**"ತಿಳಿಯಿರಿ! ದೇವ ಸ್ಮರಣೆಯಿಂದ ಹೃದಯಗಳಿಗೆ ಶಾಂತಿ ಲಭಿಸುತ್ತದೆ."**

**(ಕುರ್‌ಆನ್: 13: 28)**

ದೇವಾಸ್ತಿತ್ವಕ್ಕೆ ಕುರ್‌ಆನ್ ಒಂದು ನಿದರ್ಶನವಾಗಿದೆ. ಅದು ಹೇಗೆಂದು ನೋಡೋಣ. ಮಾನವನ ಹೊರತು ಇತರೆಲ್ಲ ಜೀವಜಾಲಗಳ ಜೀವನದ ಮಾರ್ಗದರ್ಶನವು ಜನ್ಮಸಿದ್ಧವೆಂದು ಕಂಡು ಬರುತ್ತದೆ. ಒಂದು ಪ್ರಾಣಿಯು ಅದರ ನಿರ್ದಿಷ್ಟ ಪಂಥದಲ್ಲಿಯೇ ಚಲಿಸಬಲ್ಲುದು! ಅದನ್ನು ಮೀರಲು ಅದಕ್ಕೆ ಸಾಧ್ಯವಿಲ್ಲ. ಆದರೆ ಮಾನವನಿಗೆ ಮಾರ್ಗದರ್ಶನದ ಅಗತ್ಯ ಅತ್ಯಧಿಕವಿದೆ. ಪ್ರತಿಯೊಂದು ಸಮಸ್ಯೆಯನ್ನು ಎದುರಿಸುವಾಗಲೂ ಯಾವುದು ತಪ್ಪು, ಯಾವುದು ಸರಿ, ಎಂಬ ಪ್ರಶ್ನೆಯು ಅವನನ್ನು ಕಾಡುತ್ತದೆ. ಮಾನವನನ್ನು ಸೃಷ್ಟಿಸಿರುವ ದೇವನು ಮಾನವನ ಈ ಅಗತ್ಯವನ್ನು ಮನಗಂಡಿದ್ದಾನೆ. ಆದ್ದರಿಂದಲೇ ಆತನು ಆದಿಮಾನವ ಆದಮ(ಅ)ರಿಂದ ಅಂತಿಮ ಪ್ರವಾದಿ ಮುಹಮ್ಮದ್‌ರ(ಸ) ತನಕ ವಿವಿಧ ಕಾಲ ಮತ್ತು ದೇಶಗಳಲ್ಲಿ ತನ್ನ ಪ್ರವಾದಿಗಳ ಮೂಲಕ ಮಾನವರಿಗೆ ಮಾರ್ಗದರ್ಶನ ನೀಡಿದನು. ಭಾರತದ ವೇದಗಳು, ಯಹೂದಿಯರ ಗ್ರಂಥ, ಕ್ರೈಸ್ತರ ಬೈಬಲ್ ಮುಂತಾದುವುಗಳೆಲ್ಲವೂ ಈ ರೀತಿ ದೊರೆತ ಗ್ರಂಥಗಳೆಂದು ನಂಬಬಹುದು. ಕುರ್‌ಆನ್ ಎಲ್ಲ ವೇದಗ್ರಂಥಗಳ ಕೊನೆಯ ಪ್ರತಿಯಾಗಿದೆ. ದೇವವಿಶ್ವಾಸವನ್ನು ಘೋಷಿಸುವ ಕುರ್‌ಆನಿನ ಸಿಂಧುತ್ವದ ಬಗ್ಗೆ ಆಲೋಚಿಸಿ ನೋಡಿರಿ.

**"ನಮ್ಮ ದಾಸನಿಗೆ ನಾವು ಅವತೀರ್ಣಗೊಳಿಸಿರುವುದರ ಕುರಿತು ನಿಮಗೆ ಸಂದೇಹವಿದ್ದರೆ ಅದಕ್ಕೆ ಸಮಾನವಾದ ಒಂದು ಅಧ್ಯಾಯವನ್ನು ನೀವು ತನ್ನಿರಿ." (ಕುರ್‌ಆನ್: 2:23)** ಕುರ್‌ಆನ್ ದೇವವಚನವೆಂಬುದಕ್ಕೆ ನಿದರ್ಶನವಾಗಿ ಈ ಸವಾಲನ್ನು ಕುರ್‌ಆನ್ ಸ್ವತಃ ಮುಂದಿರಿಸಿದೆ. ಅರಬ್ ಸಾಹಿತ್ಯವು ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲದಲ್ಲಿ ಈ ಪಂಥಾಹ್ವಾನ ನೀಡಲ್ಪಟ್ಟಿದೆ. ಆದರೂ ಆ ವಿಷಯದಲ್ಲಿ ಎಲ್ಲರೂ ಸೋಲೊಪ್ಪಿರುವುದನ್ನು ನಾವು ತಿಳಿದಿದ್ದೇವೆ. ಕುರ್‌ಆನ್ ದೇವವಚನವೆಂಬ ಬಗ್ಗೆ ಸಂದೇಹವಿರುವವರೊಂದಿಗೆ ದಿಟ್ಟ ಸ್ವರದಲ್ಲಿ ಅದು ಹೀಗೆ ಹೇಳಿದೆ: **"ಸ್ವಚ್ಛಂದವಾಗಿ ಅವರು (ಮುಹಮ್ಮದ್) ಮಾತನಾಡುವವರಲ್ಲ. ಇದು ಅವರಿಗೆ ಇಳಿಸಲಾಗುವ ದಿವ್ಯವಾಣಿಯಲ್ಲದೇ ಬೇರೇನೂ ಅಲ್ಲ."** ಕುರ್‌ಆನ್ ಅನೇಕ ಭವಿಷ್ಯಗಳನ್ನು ನುಡಿಯಿತು. ಅವೆಲ್ಲವೂ ಸಾಕ್ಷಾತ್ಕಾರಗೊಂಡುವು. ವೈಚಾರಿಕ ಮತ್ತು ಸಾಮಾಜಿಕ

ರಂಗಗಳಲ್ಲಿ ಕುರ್‌ಆನ್ ಸೃಷ್ಟಿಸಿದ ಕ್ರಾಂತಿ ಮತ್ತು ಅದರ ಸಾರ್ವಕಾಲಿಕ ಪ್ರತಿಪಾದನೆಗಳು ಕುರ್‌ಆನಿನ ದಿವ್ಯತೆಯನ್ನು ಬಹಿರಂಗಪಡಿಸುತ್ತವೆ. 23 ವರ್ಷಗಳ ಅವಧಿಯಲ್ಲಿ ಅವತೀರ್ಣಗೊಂಡ ಆ ಗ್ರಂಥದಲ್ಲಿ ಯಾವ ವೈರುಧ್ಯಗಳೂ ಇಲ್ಲ. ಅದರಲ್ಲಿರುವ ವಿಸ್ಮಯಕಾರಿ ವೈಜ್ಞಾನಿಕ ವಿಮರ್ಶೆಗಳು, ಉನ್ನತ ಜೀವನ ಮೌಲ್ಯ ಇತ್ಯಾದಿ ವಾಸ್ತವಿಕತೆಗಳು ಅದು ಮುಹಮ್ಮದ್‌ರ(ಸ) ಸ್ವಂತ ಕೃತಿಯಲ್ಲ. ಬದಲಾಗಿ ದೇವನಿಂದ ಅವತೀರ್ಣಗೊಂಡ ಗ್ರಂಥ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಆದ್ದರಿಂದ ಕುರ್‌ಆನನ್ನೇ ದೇವಾಸ್ತಿತ್ವದ ದೃಷ್ಟಾಂತವಾಗಿ ಅಂಗೀಕರಿಸಬಹುದು.

ಪ್ರವಾದಿ ಮುಹಮ್ಮದ್‌ರು(ಸ) ಪ್ರಾಮಾಣಿಕರೆಂಬುದನ್ನು ಅವರ ವೈರಿಗಳೇ ಒಪ್ಪಿದ್ದಾರೆ. ಈ ಹಿನ್ನೆಲೆಯಲ್ಲಿ ಸತ್ಯನಿಷ್ಠರಾದ ಪ್ರವಾದಿ ಮುಹಮ್ಮದ್‌ರು(ಸ), ದೇವಾಸ್ತಿತ್ವವನ್ನು ಘೋಷಿಸಿ, ದೇವ ವಿಶ್ವಾಸದ ಕರೆ ನೀಡಿದರು. ದೇವಾದೇಶದಂತೆ ಜೀವಿಸಬೇಕು. ಇಲ್ಲದಿದ್ದರೆ ಮರಣೋತ್ತರ ಜೀವನದಲ್ಲಿ ಶಿಕ್ಷೆ ಅನುಭವಿಸಬೇಕಾದೀತೆಂದು ಎಚ್ಚರಿಕೆ ನೀಡಿರುವುದೇ ದೇವಾಸ್ತಿತ್ವಕ್ಕೆ ಸಾಕ್ಷಿಯಾಗಿದೆ. ಪ್ರವಾದಿವರ್ಯರ(ಸ) ಕಡು ವೈರಿ ಮತ್ತು ವ್ಯಾಪಾರಿಯಾಗಿದ್ದ ಅಬೂ ಸುಫ್‌ಯಾನ್‌ರೊಂದಿಗೆ ರೋಮನ್ ಚಕ್ರವರ್ತಿ ಹರ್ಕ್ಯೂಲಸ್ ಹೀಗೆ ಪ್ರಶ್ನಿಸಿದರು:

"ಈ ವಾದವನ್ನು ಪ್ರತಿಪಾದಿಸುವುದಕ್ಕಿಂತ ಮುಂಚೆ ಅವರು [ಪ್ರವಾದಿ ಮುಹಮ್ಮದ್(ಸ)] ಸುಳ್ಳು ಹೇಳುತ್ತಿದ್ದಾರೆಂದು ನಿಮಗೆ ಸಂದೇಹವಿದೆಯೇ?" 'ಇಲ್ಲ' ಎಂದು ಅಬೂ ಸುಫ್‌ಯಾನ್ ಉತ್ತರಿಸಿದರು. (ಬುಖಾರಿ)

ಪ್ರವಾದಿವರ್ಯರಿಗೆ(ಸ) ಈ ಸಂದೇಶ ಪ್ರಚಾರದಿಂದ ಮರ್ದನಗಳನ್ನು ಸಹಿಸುವುದರ ವಿನಾ ಇನ್ನಾವ ಸ್ವಾರ್ಥ ಹಿತಾಸಕ್ತಿಯೂ ಇರಲಿಲ್ಲ. ಇಸ್ಲಾಮಿನ ವೈರಿಗಳಾದ ಕುರೈಶಿ ನಾಯಕರು ಪ್ರವಾದಿಯ ಬಳಿ ಹೋಗಿ ಹೀಗೆಂದರು: "ನಿಮಗೆ ಆಡಳಿತಗಾರನಾಗುವ ಬಯಕೆಯಿದ್ದರೆ ನಾವು ನಿಮ್ಮನ್ನು ಆಡಳಿತಗಾರನಾಗಿ ಮಾಡುತ್ತೇವೆ. ಧನಿಕನಾಗ ಬೇಕೆಂದಿದ್ದರೆ ನಮ್ಮೆಲ್ಲರಿಗಿಂತ ದೊಡ್ಡ ಧನಿಕನಾಗಿ ಮಾಡುತ್ತೇವೆ. ವಿವಾಹವಾಗುವ ಬಯಕೆಯಿದ್ದರೆ ಅದನ್ನೂ ನಾವು ಈಡೇರಿಸಿಕೊಡುವೆವು. ಈ ಹೊಸ ಆಂದೋಲನವನ್ನು ತೊರೆದರೆ ಸಾಕು." ಅದಕ್ಕುತ್ತರವಾಗಿ ಪ್ರವಾದಿವರ್ಯರು(ಸ) ಕುರ್‌ಆನಿನ ಈ ವಾಕ್ಯವನ್ನು ಓದಿದರು:

"ಹೇಳಿರಿ. ಖಂಡಿತವಾಗಿಯೂ, ನಾನು ನಿಮ್ಮಂತೆಯೇ ಕೇವಲ ಓರ್ವ ಮಾನವ.

ನಿಮ್ಮ ದೇವನು ಏಕೈಕ ದೇವನೆಂದು ನನಗೆ ಆದೇಶ ನೀಡಲಾಗಿದೆ. ಆದ್ದರಿಂದ ಅವನ ಸನ್ಮಾರ್ಗದಲ್ಲಿ ನಡೆಯಿರಿ. ಅವನಿಗೆ ಸಹಭಾಗಿಗಳನ್ನು ಕಲ್ಪಿಸುವ ಬಹುದೇವ ವಿಶ್ವಾಸಿಗಳಿಗೆ ವಿನಾಶ ಕಾದಿದೆ." **(ಕುರ್‌ಆನ್: 41: 6)**

ಅವರು ಸಂದರ್ಭ ಸಾಧಕರಾಗಿರಲಿಲ್ಲ. ಇತರೆಲ್ಲರಿಗಿಂತ ಹೆಚ್ಚು ಅವರು ದೇವನಲ್ಲಿ ವಿಶ್ವಾಸವಿರಿಸಿದ್ದರು. ದೇವನಿಗೆ ಭಯಪಡುತ್ತಿದ್ದರು. ರಾತ್ರಿಗಳಲ್ಲಿ ನಿದ್ರೆ ತೊರೆದು ಪ್ರಾರ್ಥಿಸುತ್ತಿದ್ದರು. ಉಪವಾಸ ಆಚರಿಸುತ್ತಿದ್ದರು. ತ್ಯಾಗಗಳನ್ನು ಅನುಭವಿಸಿದ್ದರು. ಅಂತಹ ಸತ್ಯನಿಷ್ಠ ಪ್ರವಾದಿಯು 'ದೇವನಿದ್ದಾನೆ, ಅವನನ್ನು ಅನುಸರಿಸಬೇಕೆಂದು' ನಮಗೆ ಬೋಧಿಸಿರುವಾಗ ನಮಗೆ ಅದನ್ನು ನಿರ್ಲಕ್ಷಿಸಲಾದೀತೇ? ಅಂತ್ಯ ಪ್ರವಾದಿಯ ಕುರಿತು ಪ್ರಾಚೀನ ವೇದಗಳಲ್ಲಿ ಬಂದಿರುವ ಪ್ರಸ್ತಾಪವೂ ಪ್ರವಾದಿಯವರ ಸತ್ಯನಿಷ್ಠೆಯನ್ನು ಖಚಿತಪಡಿಸುತ್ತದೆ.

ಕೆಲವು ಉದಾಹರಣೆಗಳನ್ನು ನೋಡಿರಿ- ಭವಿಷ್ಯ ಪುರಾಣದಲ್ಲಿ ಈ ರೀತಿ ಹೇಳಲಾಗಿದೆ:

1. ಓರ್ವ ಮ್ಲೇಚ್ಛ ಆಚಾರ್ಯನು, ಪರದೇಶ ನಿವಾಸಿ, ತನ್ನ ಅನುಯಾಯಿಗಳೊಂದಿಗೆ ಪ್ರತ್ಯಕ್ಷನಾಗುವನು. ಆತನ ಹೆಸರು ಮುಹಮ್ಮದ್ ಎಂದಿರುವುದು.

**(ಭವಿಷ್ಯ ಪುರಾಣ, ಪ್ರತಿಸರ್ಗ ಪರ್ವ 111-83, 58)**

ಅಲ್ಲೋಪನಿಷತ್ ಈ ರೀತಿ ಹೇಳುತ್ತದೆ:

2. "ಅಲ್ಲಾಹ್ ಅವರ್ಣನೀಯ ಗುಣಗಳನ್ನು ಹೊಂದಿದವನೂ ಪರಿಪೂರ್ಣನೂ ಸರ್ವಜ್ಞನೂ ಆಗಿದ್ದಾನೆ. ಎಲ್ಲವನ್ನೂ ಅರಿಯುವಾತನೂ ಪ್ರಕಾಶದ ಪ್ರಕಾಶವೂ ಆಗಿರುವ ಅಲ್ಲಾಹನ ದೂತನೇ ಮುಹಮ್ಮದ್, ಅಲ್ಲಾಹ್ ಅನಶ್ವರನೂ ಏಕನೂ ಸದಾ ಪರಿಪೂರ್ಣನೂ ನಿರಾವಲಂಬನೂ ಆಗಿದ್ದಾನೆ."

**(ಶಾಸ್ತ್ರಿ ಉಪೇಂದ್ರನಾಥ ಮುಖ್ಯೋಪಾಧ್ಯಾಯ ವ್ಯಾಖ್ಯಾನ ಸಹಿತ ಕಲ್ಕತ್ತದಿಂದ ಪ್ರಕಾಶನಗೊಳಿಸಿದ ಅಲ್ಲೋಪನಿಷತ್ತಿನ 18ನೆಯ ಸೂಕ್ತದ ಅರ್ಥ)**

ಬುದ್ಧನ ಸುವಾರ್ತೆ ಎಂಬ ಗ್ರಂಥದಲ್ಲಿ ಈ ರೀತಿ ಹೇಳಿದೆ: ಬುದ್ಧನ ಶಿಷ್ಯ ಆನಂದನು ಬುದ್ಧನೊಡನೆ ವಿಚಾರಿಸಿದನು: "ನೀವು ಹೋದ ಬಳಿಕ ನಮಗೆ ಯಾರು ಕಲಿಸಿಕೊಡುವರು." ಆಗ ಅನುಗ್ರಹೀತನು ಹೀಗೆ ಹೇಳಿದನು. "ಲೋಕದಲ್ಲಿ ಬಂದ ಬುದ್ಧರಲ್ಲಿ ನಾನು ಆದಿ ಅಥವಾ ಅಂತ್ಯನಲ್ಲ. ಸಮಯವಾದರೆ ಪವಿತ್ರನೂ

ವಿಜ್ಞನೂ ಮತ್ತು ಬುದ್ಧಿವಂತನೂ ಆದ ಓರ್ವ ಬುದ್ಧನು ಲೋಕದಲ್ಲಿ ಅವತರಿಸುತ್ತಾನೆ... ಅನುಗ್ರಹೀತನು ಉತ್ತರ ನೀಡಿದನು: ಆತನು 'ಮೈತ್ರೇಯ'ನೆಂದು ಖ್ಯಾತನಾಗುವನು."[1]

ಪ್ರಪಂಚದ ಸ್ವರೂಪ, ವ್ಯವಸ್ಥೆ ಮತ್ತು ಕ್ರಿಯೆಯು ಪ್ರಪಂಚಕ್ಕೆ ಏಕರೂಪತೆಯಿದೆ ಮತ್ತು ಇದರ ಕರ್ತನು ಓರ್ವನೇ ಆಗಿರಬೇಕೆಂಬುದನ್ನು ಖಚಿತಪಡಿಸುತ್ತದೆ. ಒಂದಕ್ಕಿಂತ ಹೆಚ್ಚು ದೇವರಿರುತ್ತಿದ್ದರೆ ಈ ಏಕರೂಪತೆ ಇರುತ್ತಿರಲಿಲ್ಲ. ಬದಲಾಗಿ ಅವ್ಯವಸ್ಥೆ ಕಂಡುಬರುತ್ತಿತ್ತು. ಎಲ್ಲ ಧರ್ಮ ಮತ್ತು ಜನ ವಿಭಾಗಗಳಲ್ಲಿಯೂ ಸರ್ವಶಕ್ತನಾದ ಏಕದೇವ ಪ್ರಜ್ಞೆಯನ್ನು ಕಾಣಬಹುದಾಗಿದೆ. ದೇವನ ಶಕ್ತಿಗಳಿಗೆ ಮೂರ್ತ ರೂಪ ನೀಡುವ ಅಥವಾ ಮಹಾ ಪುರುಷರಿಗೆ ದೇವತ್ವವನ್ನು ನೀಡುವ ಮೂಲಕ ಬಹುದೇವಾರಾಧನೆ ಪ್ರಾರಂಭವಾಗಿರುವಂತೆ ಭಾಸವಾಗುತ್ತದೆ. ಹಿಂದೂಗಳು ಬಹುದೇವಾರಾಧಕರೆಂದು ಪ್ರಸಿದ್ಧರಾದರೂ ಪ್ರಾಚೀನ ಕಾಲದ ಆರ್ಯರು ಏಕದೇವ ವಿಶ್ವಾಸಿಗಳಾಗಿದ್ದರು ಮತ್ತು ಬಹುದೇವಾರಾಧನೆಯು ಅನಂತರದ ಕಾಲಗಳಲ್ಲಿ ಪ್ರಚಾರಗೊಂಡಿತೆಂದು ತಿಳಿದು ಬರುತ್ತದೆ. ಆರ್ಯರ ಪ್ರಾಚೀನ ಗ್ರಂಥವಾಗಿರುವ ಋಗ್ವೇದದಲ್ಲಿ ಏಕದೇವ ವಿಶ್ವಾಸವನ್ನು ಪ್ರತಿಪಾದಿಸುವ ಅನೇಕ ಸೂಕ್ತಗಳಿವೆ. ಕೆಲವು ಉದಾಹರಣೆಗಳನ್ನು ನೋಡಿರಿ!

ಋಗ್ವೇದದಲ್ಲಿ ಹೀಗೆ ಹೇಳಲಾಗಿದೆ:

ಇಂದ್ರಂ ಮಿತ್ರಂ ವರುಣಮಗ್ನಿ ಮಾಹುರಥೋ ದಿವ್ಯಃ ಸ
ಸುಪರ್ಣೋ ಗರುತ್ಮಾನ್ ।
ಏಕಂ ಸದ್ವಿಪ್ರಾ ಬಹುಧಾವದಂತಿ ಅಗ್ನಿ ಯಮಂ
ಮಾತರಿಶ್ವಾನಮಾಹುಃ ॥

**(22 ಋಗ್ವೇದ 1. 164, 63 ಅಥರ್ವವೇದ, ನವಮಕಾಂಡಂ ಸೂಕ್ತ 10:28, ವಿದ್ಯಾರ್ಥಿ ಮಿತ್ರಂ 1976 P. 563)**

"ಅವರು ಅದನ್ನು ಇಂದ್ರ, ಮಿತ್ರ, ಅಗ್ನಿ ಮುಂತಾಗಿ ಕರೆಯುತ್ತಾರೆ. ಅದು ದಿವ್ಯ ರೆಕ್ಕೆಗಳಿರುವ ಸೂರ್ಯನಾಗಿದೆ. ಕವಿಗಳು ಆ ಒಂದಕ್ಕೆ ಅನೇಕ ಹೆಸರುಗಳನ್ನು

---

**1.** The Gospel of Budha, National Book Trust, New Delhi. Third Edition October 1971 P. 218-219

ನೀಡಿ ಅದನ್ನು ಅಗ್ನಿ, ಯಮ, ಮಾತರಿಶ್ವ ಮುಂತಾಗಿ ಕರೆಯುತ್ತಾರೆ." (ಅನುವಾದ: ಕೆ. ದಾಮೋದರನ್. ಭಾರತೀಯ ತತ್ವಚಿಂತ, ಕೇರಳ ಭಾಷಾ ಇನ್ಸ್‌ಟಿಟ್ಯೂಟ್. 1973 P. 45)

ಇನ್ನೊಂದೆಡೆ ಋಗ್ವೇದ ಹೇಳುತ್ತದೆ:

ಏಕ ಏವಾಗ್ನಿರ್ಬಹುಧಾ ಸಮಿದ್ಧಃ ಏಕಸ್ಸೂರ್ಯೋ
ವಿಶ್ವಮನುಪ್ರಭೂತಃ
ಏಕೈ ವೋಷಾಃ ಸರ್ವಮಿದಂ ವಿಭಾತ್ಯೇಕಂ ವಾ ಇದಂ
ವಿಭವ್ವಾವ ಸರ್ವಂ ॥ **(ಋಗ್ವೇದ VII 58-2)**

"ಅನೇಕ ಕಡೆಗಳಲ್ಲಿ ಉರಿಯುವ ಬೆಂಕಿ ಒಂದೇ ಆಗಿದೆ. ಇದೆಲ್ಲವನ್ನೂ ಪ್ರಜ್ವಲಿಸುವ ಉಷಸ್ಸು ಒಂದೇ ಆಗಿದೆ. ಇವೆಲ್ಲವೂ ಅದೊಂದೇ."

ಭಗವದ್ಗೀತೆಯಲ್ಲಿ ಈ ರೀತಿ ಹೇಳಿದೆ:

"ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।
ಪರಂ ಭಾವಮಜಾನಂತೋ ಮಮಾವ್ಯಯ ಮನುತ್ತಮಮ್

**(ಶ್ರೀ ಮದ್ಭಗವದ್ಗೀತಾ 7: 24)**

"ನಶ್ವರ ಮತ್ತು ಸರ್ವೋತ್ಕೃಷ್ಟವಾದ ನನ್ನ ನಿಜ ತತ್ವವನ್ನು ತಿಳಿಯದ ಅವಿವೇಕಿಗಳು ಅಪ್ರಾಕೃತ ಸ್ವರೂಪವಾದ ನನ್ನನ್ನು ಹುಟ್ಟು ಸಾವುಗಳಿಗೆ ಬದ್ಧವಾಗಿರುವ ಜಡದೇಹಿಯೆಂದು ತಿಳಿಯುತ್ತಾರೆ."

ಭಗವದ್ಗೀತೆಯ 9ನೆಯ ಅಧ್ಯಾಯದ 11ನೆಯ ಶ್ಲೋಕವು ಈ ರೀತಿ ಹೇಳುತ್ತದೆ:

ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್
ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್

**(ಶ್ರೀ ಮದ್ಭಗವದ್ಗೀತಾ 9:11)**

"ಎಲ್ಲಕ್ಕೂ ಹಿರಿಯ ಒಡೆಯನಾದ ನನ್ನ ನಿಜ ಸ್ವರೂಪವನ್ನು ತಿಳಿಯದ ಅವಿವೇಕಿಗಳೂ ನನ್ನನ್ನು ಮಾನವರಂತೆ ಭೌತಿಕ ದೇಹವುಳ್ಳವನೆಂದು ಅವಮಾನಗೊಳಿಸುತ್ತಾರೆ."

ಋಗ್ವೇದದಲ್ಲಿ ಹೀಗಿದೆ:

"ಯಾರು ನಮ್ಮ ತಂದೆ, ಸೃಷ್ಟಿಕರ್ತನಾಗಿರುವನೋ ಯಾರು ಎಲ್ಲ ಸೃಷ್ಟಿಗಳನ್ನೂ ಸ್ಥಳಗಳನ್ನೂ ಅರಿತಿದ್ದಾನೆಯೋ ದೇವತೆಗಳಿಗೆ ಯಾರು ಹೆಸರನ್ನಿರಿಸುವನೋ

ಆತನಿಂದಲೇ ಎಲ್ಲ ಸೃಷ್ಟಿಗಳೂ ಬೇಡಿಕೊಳ್ಳುತ್ತವೆ."

**(ಇಂಗ್ಲೀಷ್ ಅನುವಾದಕ್ಕೆ Dr. Kaegi Arrow Smith Ph.D. The Rigveda, Amanco Book Agency, New Delhi Second Edn 1975 H. 89 ನೋಡಿರಿ.)**

ಋಗ್ವೇದ 10, 121: 1-5ರಲ್ಲಿ ಹೀಗೆ ಹೇಳಿದೆ:

"ಆದಿಯಲ್ಲಿ ಹಿರಣ್ಯ ಗರ್ಭವು ಮೇಲೆದ್ದಿತು. ಎಲ್ಲವುಗಳ ಏಕನಾಥನಾಗಿ, ಭೂಮಿಯನ್ನು ಅವುಗಳಿಗೆ ಬದ್ಧಗೊಳಿಸಿ, ಆಕಾಶವನ್ನೂ ನಿರ್ಮಿಸಲಾಯಿತು. (ಅವನ ವಿನಾ) ಇನ್ನಾವ ದೇವನಿಗೆ ನಾವು ಕಾಣಿಕೆಗಳನ್ನು ನೀಡಿ ಗೌರವಿಸಲಿ? ನಮಗೆ ಉಸಿರಾಟ ಮತ್ತು ಶಕ್ತಿಯನ್ನು ನೀಡಿದವನಾರು? ಯಾರ ಆಜ್ಞೆಗಳನ್ನು ಎಲ್ಲ ಸೃಷ್ಟಿಗಳೂ ದೇವತೆಗಳೂ ಕಡ್ಡಾಯಪೂರ್ವಕ ಅನುಸರಿಸಬೇಕಾಗಿದೆಯೋ (ಆತನ ವಿನಾ) ಇನ್ನಾವ ದೇವನನ್ನು ನಾವು ಕಾಣಿಕೆ ನೀಡಿ ಗೌರವಿಸಲಿ?"

"ಯಾರು ಸ್ವಶಕ್ತಿಯಿಂದ ಏಕಾಧಿಪತಿಯಾದನೋ ಎಲ್ಲ ಉಸಿರಾಡುವವುಗಳ, ನಿದ್ರಿಸುವವುಗಳ, ಎಚ್ಚರಿಸುವವುಗಳ, ಮಾನವರ ಹಾಗೂ ಪ್ರಾಣಿಗಳ, ಪ್ರಭು (ಆತನೇ ಆಗಿದ್ದಾನೆ, ಆತನ ವಿನಾ) ಇನ್ನಾವ ದೇವನನ್ನು ನಾವು ಕಾಣಿಕೆ ನೀಡಿ ಗೌರವಿಸಲಿ?"

"ಯಾವ ಶಕ್ತಿ ಮತ್ತು ಪ್ರತಾಪಗಳನ್ನು ಹಿಮಶ್ರೇಣಿ, ಸಮುದ್ರ ಮತ್ತು ವಿದೂರ ನದಿಗಳು ಪ್ರದರ್ಶಿಸುತ್ತಿವೆಯೋ, ಯಾರ ಹಸ್ತಗಳು ವಿಸ್ತಾರವಾದ ಪ್ರದೇಶಗಳನ್ನು ವ್ಯಾಪಿಸಿವೆಯೋ, (ಆತನ ವಿನಾ) ಇನ್ನಾವ ದೇವನಿಗೆ ನಾವು ಕಾಣಿಕೆ ನೀಡಿ ಗೌರವಿಸಲಿ" "ಯಾರು ಆಕಾಶಗಳಲ್ಲಿ ಆಕಾಶವಾಗಿರುವ 'ಆಕಾಶ ಗಂಗೆ'ಯನ್ನು ಸ್ಥಾಪಿಸಿದನೋ, ವಾಯು ತರಂಗಗಳನ್ನು ಅಳೆದನೋ (ಆತನ ವಿನಾ) ಇನ್ನಾವ ದೇವನಿಗೆ ನಾವು ಕಾಣಿಕೆ ನೀಡಿ ಗೌರವಿಸಲಿ?"

ಪ್ರಪಂಚದ ಆದಿಯಲ್ಲಿದ್ದ ಸ್ಥಿತಿಯನ್ನು ಋಗ್ವೇದದ 10-129ರಲ್ಲಿ ಈ ರೀತಿ ವಿವರಿಸಲಾಗಿದೆ: "ಪ್ರಾಣಿ ಮತ್ತು ಮರಣ ಕ್ರಿಯೆಗಳು ಅಸ್ತಿತ್ವದಲ್ಲಿರಲಿಲ್ಲ. ರಾತ್ರಿ ಮತ್ತು ಹಗಲುಗಳಲ್ಲಿ ವ್ಯತ್ಯಾಸವಿರಲಿಲ್ಲ. ಸ್ವಾವಲಂಬನೆಯಿಂದ, ಶಾಂತವಾಗಿ ಒಂಟಿಯಾಗಿ ಆ ಏಕವು, ಅದರ ಹೊರತಾಗಿ, ಅದರ ಮೇಲೆಯೂ ಏನೊಂದೂ ಇರಲಿಲ್ಲ." (ಇಂಗ್ಲೀಷ್ ಅನುವಾದಕ್ಕೆ **Dr. Arrow Smith, Ph.D. The Rigveda opticit P. 91** ನೋಡಿರಿ.) ಬಹುದೇವಾರಾಧನೆಯು ಹೇಗೆ ಜನ್ಮ

ತಾಳಿತೆಂಬುದನ್ನು ಋಗ್ವೇದ 1, 104, 64ರಲ್ಲಿ ಸೂಚಿಸಿರುವುದನ್ನು ನಾವು ನೋಡಿದೆವು. ಕವಿಗಳು ಅಥವಾ ಗ್ರಂಥಕಾರರು ವರ್ಣನೆಯ ಶೈಲಿಯನ್ನು ಬಳಸಿ, ಜನಸಾಮಾನ್ಯರು ಕವಿ ಮಾತುಗಳನ್ನು ಯಥಾವತ್ತಾಗಿ ಅಂಗೀಕರಿಸಿರುವುದೇ ಬಹುದೇವಾರಾಧನೆಗೆ ಪ್ರೇರಕವಾಯಿತೆಂದು ಋಗ್ವೇದ ಹೇಳಿರುವುದು ಎಷ್ಟೊಂದು ದಿಟ.

ಸಂಕ್ಷಿಪ್ತದಲ್ಲಿ ದೇವ ವಿಶ್ವಾಸವು ನೈಸರ್ಗಿಕ ಬೇಡಿಕೆಯಾಗಿದೆ. ಪ್ರಪಂಚದ ಸೂರ್ಯ, ಚಂದ್ರ-ನಕ್ಷತ್ರಾದಿಗಳು, ಅವು ಸುವ್ಯವಸ್ಥಿತವಾಗಿ ಮುನ್ನಡೆಯುತ್ತಿರುವ ನಿಯಮಗಳು, ಅಸಂಖ್ಯಾತ ಸೃಷ್ಟಿ ಜಾಲಗಳು, ಅವುಗಳಲ್ಲಿ ಅತ್ಯುನ್ನತನಾಗಿರುವ ಮಾನವ. ಮಾನವನ ವೈಶಿಷ್ಟ್ಯಗಳೆಲ್ಲವೂ ನೈಸರ್ಗಿಕ ಬೇಡಿಕೆಯನ್ನು ಅರ್ಥಾತ್, ದೇವ ವಿಶ್ವಾಸವನ್ನು ಅಸಂದಿಗ್ಧವಾಗಿ ಘೋಷಿಸುತ್ತವೆ. ವೈಜ್ಞಾನಿಕ ಸಂಶೋಧನೆಗಳೂ ಇತಿಹಾಸದ ಪುಟಗಳೂ ದೇವಾಸ್ತಿತ್ವದ ಡಂಗುರ ಸಾರುತ್ತಿವೆ. ಸತ್ಯ ನಿಷ್ಠರಾಗಿದ್ದ ಪ್ರವಾದಿ ಮುಹಮ್ಮದ್‌ರ(ಸ) ಬೋಧನೆಗಳು ಈ ದೃಷ್ಟಾಂತಗಳನ್ನು ಸಮರ್ಥಿಸುತ್ತವೆ. ಪವಿತ್ರ ಕುರ್‌ಆನ್ ಗ್ರಂಥವು ದೇವಾಸ್ತಿತ್ವವನ್ನು ಸಂಪೂರ್ಣವಾಗಿ ಸಮರ್ಪಿಸಿ ಆ ಬಗ್ಗೆ ವಿಶ್ವಾಸಿಗಳಿಗೆ ಮಾರ್ಗದರ್ಶನ ನೀಡುತ್ತದೆ. ಪೂರ್ವ ವೇದಗಳು ಅದಕ್ಕೆ ಪುಷ್ಟಿ ನೀಡುತ್ತವೆ. ಮಾನವನು ತನ್ನನ್ನೂ ತನ್ನ ಪರಿಸರವನ್ನೂ ದಿಟ್ಟಿಸುವಾಗ ಆತನ ಹೃದಯವು ಈ ರೀತಿ ಉದ್ಗರಿಸುವುದು. "ಅಲ್ಲಾಹನ ವಿನಾ ಆರಾಧ್ಯರಿಲ್ಲವೆಂದೂ ಮುಹಮ್ಮದ್(ಸ) ಆತನ ಪ್ರವಾದಿಯೆಂದೂ ನಾನು ಸಾಕ್ಷ್ಯ ವಹಿಸುತ್ತೇನೆ."